# ಪ್ರಬೋಧಾನಂದಂ ನಾಟಕಗಳು




ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (೪೪) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org





# ಪ್ರಬೋಧಾನಂದಂ

## ನಾಟಕಗಳು


ಗ್ರಂಥಕರ್ತ : **ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (88) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 39 ಪ್ರಥಮ ಮುದ್ರಣ : ಮೇ–2017

ಪ್ರತಿಗಳು : 1000 **ಬೆಲೆ. 80/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಿ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ–ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾ ಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ – ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವ ಗ್ರಂಥದಲ್ಲಿ ವಜ್ರವಾಕ್ಯಗಳು
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲು ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ
93. ಪ್ರಾಥಮಿಕ ಜ್ಞಾನ
94. ರಾಜಕೀಯ  ರಾಜಕೀಯ
95. ಉಗ್ರವಾದ ಸತ್ಯಕ್ಕೋಸ್ಕರವೇ
96. ಒಬ್ಬ ವ್ಯಕ್ತಿಯಲ್ಲಿ ಎರಡು ಕೋನಗಳು
97. ಮಾನವತ್ವ
98. ಧ್ಯಾನ – ಪ್ರಾರ್ಥನೆ – ನಮಾಜ್



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
     ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಗ್ರಾಹಿತ ಶಕ್ತಿ
121. ಭೌತಿಕಮು – ಅಭೌತಿಕಮು
122. ದೇವುನಿ ಆಜ್ಞ ಮರಣಂ
123. ಮತ ಸಾಮರಸ್ಯಂ
124. ಮೋಕ್ಷಮು – ಮೋಸಮು
125. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

---

**ಸೂಚನೆ** : ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635, 7619545963, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್**.B
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ) Cell :**9632418716**

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾನಗರ, ತೊಣಚಿಕೊಪ್ಪಲ್, ಮೈಸೂರ್
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮುಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಪ್ರಕಾಶ್ ರೆಡ್ಡಿ**
ಸೆಲ್:9845656774,9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ರಾವಣ ಬ್ರಹ್ಮ

**ಆಕಾಶವಾಣಿ :–** ಬ್ರಹ್ಮಾ! ರಾವಣಬ್ರಹ್ಮಾ!! ಮೂರು ಕಾಲಗಳನ್ನು ತಿಳಿದ ತ್ರಿಕಾಲಜ್ಞಾನಿ, ಮೂರು ಯೋಗಗಳನ್ನು ತಿಳಿದ ಬ್ರಹ್ಮಜ್ಞಾನಿ, ಮೂರು ಆತ್ಮಗಳ ವಿವರವನ್ನು ತಿಳಿದ ಆತ್ಮಜ್ಞಾನಿಯಾದ ಓ ರಾವಣಬ್ರಹ್ಮ! ತ್ರೇತಾಯುಗದ ಕಾಲದಲ್ಲಿನ ನಿನ್ನನ್ನು ಕುರಿತು ಕಲಿಯುಗದಲ್ಲಿನ ಮನುಷ್ಯರು ಕೆಟ್ಟ ಉದ್ದೇಶ ಹೊಂದಿದ್ದಾರೆ. ಅವರ ಉದ್ದೇಶದಲ್ಲಿ ನೀನು ರಾಕ್ಷಸನಂತೆ, ನೀಚನಂತೆ, ಕಾಮಾಂಧನಂತೆ, ಯಜ್ಞಗಳನ್ನು ನಾಶ ಮಾಡಿಸಿದ ದುರ್ಮಾರ್ಗನಂತೆ, ಸೀತೆ ಸ್ವಯಂವರಕ್ಕೆ ಹೋಗಿ ಶಿವಧನಸ್ಸನ್ನು ಎತ್ತಲಾರದೆ ಮುಖಭಂಗವಾದವನಂತೆ, ಪರಕಾಂತ ವ್ಯಾಮೋಹದಿಂದ ಸೀತಾದೇವಿಯನ್ನು ಅಪಹರಿಸಿ ಪ್ರಾಣಕ್ಕೆ ತಂದುಕೊಂಡ ಅಜ್ಞಾನಿಯಂತೆ, ಹತ್ತು ತಲೆಗಳು ಇದ್ದರೂ ಬುದ್ಧಿ ಇಲ್ಲದವನಾಗಿ, ಒಂದು ತಲೆ ಇರುವ ರಾಮನ ಕೈಯ್ಯಲ್ಲಿ ಸತ್ತಿರುವ ಕೈಲಾಗದವನಂತೆ, ಸ್ತ್ರೀಯರನ್ನು ಗೌರವಿಸದವನಂತೆ, ದೈವಭಕ್ತಿ ಇಲ್ಲದ ಮೂಢನಂತೆ, ಈ ವಿಧವಾಗಿ ಎಷ್ಟೋ ವಿಧಗಳಲ್ಲಿ ನಿನ್ನನ್ನು ದೂಷಿಸುತ್ತಿದ್ದಾರೆ. ನಿನ್ನನ್ನು ಸಾಯಿಸಿದ ರಾಮನನ್ನು ದೇವರ ಹಾಗೆ ತಿಳಿದು ಪೂಜಿಸುತ್ತಿದ್ದಾರೆ. ಕಲಿಯುಗದಲ್ಲಿನ ಪ್ರಜೆಗಳು ಏಕೆ ಆ ವಿಧವಾಗಿ ನಿನ್ನ ಮೇಲೆ ದುರುದ್ದೇಶ ಹೊಂದಿದ್ದಾರೆ. ಇವುಗಳಿಗೆ ಸಮಾಧಾನ ನೀನೇ ಹೇಳಬೇಕು!

**ರಾವಣ :–** ಆತ್ಮ ಸ್ವರೂಪವಾಗಿ ಯಾರಿಗೂ ಕಾಣಿಸದ ಓ ದಿವ್ಯವಾಣಿ! ನಿನಗೆ ನನ್ನ ನಮಸ್ಕಾರಗಳು. ಸ್ವತಃ ನೀನೇ ನನ್ನನ್ನು ತ್ರಿಕಾಲಜ್ಞಾನಿಯೆಂದು, ಆತ್ಮಜ್ಞಾನಿಯೆಂದು, ಬ್ರಹ್ಮಯೆಂದು ಸಂಭೋಧಿಸಿದಾಗ, ಕಲಿಯುಗದಲ್ಲಿ ಒಳ್ಳೆಯ ಕೆಟ್ಟ ವಿಚಕ್ಷಣಾ ಜ್ಞಾನವಿಲ್ಲದ ಮಾನವರು ಏನೆಂದರೇ ನನಗೇನು? ಭೂಮಿಮೇಲೆ ದ್ವಾದಶ ಗುಣಗಳಲ್ಲಿ ಸಿಲುಕಿ, ಅವುಗಳ ವಿವರ ತಿಳಿಯದ ಮಾನವರು, ಅಜ್ಞಾನ ಹೊರತು ಜ್ಞಾನವೇನೋ ತಿಳಿಯದ ಮಾನವರು, ದೇವತೆಗಳು ಹೊರತು ದೇವರ ಕುರಿತು ರವೆಯಷ್ಟು ಕೂಡಾ ತಿಳಿಯದ ಮಾನವರು, ಜನನ ಮರಣ ಅಂತರಾರ್ಥ ಏನೆಂದು ತಿಳಿಯದ ಮಾನವರು, ಭಗವಂತನಿಗು, ದೇವರಿಗು ವ್ಯತ್ಯಾಸ ತಿಳಿಯದ ಮಾನವರು, ಶರಿರವನ್ನು ನಡೆಸುವ ಶಕ್ತಿಯನ್ನು ಕುರಿತು

ತಿಳಿಯದ ಮಾನವರು, ಕೊನೆಗೆ ತಾನ್ಯಾರೋ ತನಗೇ ತಿಳಿಯದ ಮಾನವರು, ಯುಕ್ತಾಯುಕ್ತ ವಿಚಕ್ಷಣ ಜ್ಞಾನ ತಿಳಿಯದ ಮಾನವರು, ಶ್ರೀರಾಮನನ್ನು ಒಳ್ಳೆಯವನೆಂದರೂ, ರಾವಣಬ್ರಹ್ಮನನ್ನು ಕೆಟ್ಟವನೆಂದರೂ, ಬುದ್ಧಿಯಲ್ಲಿ ತೇಜಸ್ಸಿರುವವರು ಯಾರೂ ನಂಬುವುದಿಲ್ಲ. ಆದರೂ ನೀನು ಪ್ರತ್ಯೇಕಿಸಿ ಕೇಳಿದ್ದೀಯ ಆದ್ದರಿಂದ ಅಜ್ಞಾನ ಅಂಧಕಾರದಲ್ಲಿ ಸಿಲುಕಿಕೊಂಡು ವಿದ್ಯೆ ಇದ್ದು, ಸಂಸ್ಕಾರ ಇಲ್ಲದವರು, ಭಕ್ತಿಯಿದ್ದು ಭಾವವಿಲ್ಲದವರು, ಸನ್ಯಾಸವಿದ್ದು ಸಾಕ್ಷಿಯನ್ನು ತಿಳಿಯದವರು, ಆಚಾರಗಳಿದ್ದು ಅರ್ಥ ತಿಳಿಯದ ಮನುಷ್ಯರು ತಿಳಿಯುವಂತೆ, ಆಲೋಚಿಸುವಂತೆ ನಾನು ಹೇಳಬೇಕಾಗಿದ್ದೇ! ಈ ಪ್ರಜೆಗಳು ಕೇಳಬೇಕಾದ್ದೇ.

ಸೀತಾ ಸ್ವಯಂವರಕ್ಕೆ ನಾನು ಹೋಗಿ ಶಿವಧನಸ್ಸನ್ನು ಎತ್ತಲಾರದೆ ಭಂಗಪಟ್ಟಿದ್ದೇನಾ? ಸೀತೆ ಸ್ವಯಂವರ ಭಾರತದೇಶದಲ್ಲಿ ನಡೆಯುತ್ತಿರುವಾಗ, ಲಂಕೆಯಲ್ಲಿನ ನನಗೆ ಹೇಗೆ ತಿಳಿದಿದೆ? ಯಾರಾದರೂ ಸಮುದ್ರವನ್ನು ದಾಟಿ ಬಂದು ನನ್ನನ್ನು ಆಹ್ವಾನಿಸಿದ್ದಾರಾ? ಅಂದಿನ ಕಾಲದಲ್ಲಿ ಸಮುದ್ರವನ್ನು ದಾಟುವುದಕ್ಕೆ ಯಾವ ಸದುಪಾಯಗಳು ಇಲ್ವೇ! ಅದಕ್ಕೂ ಮೊದಲು ಯಾರೂ ದಾಟದ ಸಮುದ್ರವನ್ನು ಸೀತೆ ಅನ್ವೇಷಣೆಗೆ ಹನುಮಂತನು ಮಾತ್ರ ಎಗರಿ ದಾಟಿದ್ದಾನೆಂದು ಹೇಳಿದಾಗ, ರವಾನೆ ಸೌಕರ್ಯವಿಲ್ಲದ ಆ ದಿನಗಳಲ್ಲಿ ಯಾರೂ ಲಂಕೆಯೊಳಗೆ ಬಾರದಂತೆ ಅಲ್ಲವೆ! ಸೀತೆ ಸ್ವಯಂವರವನ್ನು ಕುರಿತು ತಿಳಿಸದಂತೇ ಅಲ್ಲವೆ! ಸ್ವಯಂವರದ ವಿಷಯ ನನಗೆ ತಿಳಿಯದಿದ್ದರೂ, ತಿಳಿದಂತೆ ವರ್ಣಿಸಿ, ನಾನು ಅಲ್ಲಿಗೆ ಹೋಗದಿದ್ದರೂ ಹೋದಂತೆ ಚಿತ್ರಿಸಿ, ಕೊನೆಗೆ ಶಿವಧನಸ್ಸನ್ನು ಎತ್ತದಿದ್ದರೂ ಎತ್ತಲಾರದ ನಿರ್ಬಲನನ್ನಾಗಿ ರೂಪಿಸಿ, ರಾವಣನು ಕೆಟ್ಟವನೆನ್ನುವಂತೆ ಮಾಡಿದ್ದಾರೆ. ಈ ವಿಷಯವನ್ನು ಬರೆದಿರುವುದು ಅಂದಿನ ಕವಿಗಳು. ಆದಿನದ ಕವಿಗಳು ಪ್ರಾಂತೀಯ ಅಭಿಮಾನದಿಂದ ಅವರು ಆರ್ಯರೆಂದು, ನಾವು ದ್ರಾವಿಡರೆಂದು, ದ್ರಾವಿಡರನ್ನು ರಾಕ್ಷಸರಾಗಿ, ಆರ್ಯರನ್ನು ದೇವತೆಗಳಾಗಿ ಚಿತ್ರಿಸಿ ಹೇಳಿದ ಚರಿತ್ರೆಯೇ ರಾಮಾಯಣ. ರಾಮಾಯಣದಲ್ಲಿ ನನ್ನನ್ನು ರಾಕ್ಷಸನೆಂದು ರಾಮನನ್ನು ದೇವರೆಂದು ಅಂದಿದ್ದಾರೆ. ನಾನು ಹೇಗೆ ರಾಕ್ಷಸನೋ, ರಾಮನು ಹೇಗೆ ದೇವರೋ ಯೋಚಿಸಬೇಕಾದ ಜವಾಬ್ದಾರಿ ನಿಮ್ಮದೇ.

ಸ್ವಯಂವರಕ್ಕೆ ಆಹ್ವಾನಿಸಲ್ಪಟ್ಟವರೆಲ್ಲರೂ ಭಾರತದೇಶದಲ್ಲಿ ಚಿಕ್ಕ ಚಿಕ್ಕ ಸಾಮಂತ ರಾಜರು. ಅಂತಹ ಸಾಮಂತರಾಜರು ಬಂದಿರುವ ಸ್ಥಳಕ್ಕೆ ಲಂಕೇಶ್ವರನಾದ ನಾನು, ಲಂಕಾದ್ವೀಪಕ್ಕೆ ಚಕ್ರವರ್ತಿಯಾದ ನಾನು ಹೋಗಬಲ್ಲೆನಾ? ಅಂದಿಗೆ ಮಂಡೋದರಿ ಎನ್ನುವ ಪತ್ನಿ ಸಮೇತನಾಗಿ, ಇಂದ್ರಜಿತ್ ಎನ್ನುವ ವಿವಾಹವಾದ ಕುಮಾರಯುತನಾಗಿ, ವಯಸ್ಸಾದ ನಾನು ಮಗಳೊಂದಿಗೆ ಸಮಾನವಾದ, ಮಗಳವಯಸ್ಸಿರುವ ಸೀತೆ ಸ್ವಯಂವರಕ್ಕೆ ಹೋಗಬಲ್ಲೆನಾ? ಹೋಗಿದ್ದೇನೆನ್ನುವುದು ಅಸತ್ಯ. ಅದಕ್ಕೂ ಮೊದಲೇ ಕೈಲಾಸ ಪರ್ವತವನ್ನು ಶಿವನೊಂದಿಗೆ ಸಹ ಎತ್ತಿದ ನಾನು, ಸೀತಾದೇವಿ ಎತ್ತಿದ ಒಂದು ಧನಸ್ಸನ್ನು ಎತ್ತಲಾರೆನಾ? ಸ್ವಯಂವರದಲ್ಲಿ ಸೀತೆ ಎತ್ತಿದ ಧನಸ್ಸನ್ನು ಎತ್ತಲಾರದವನು, ಅಡವಿಯಲ್ಲಿ ಸೀತೆಯನ್ನು ಮಣ್ಣಿನ ಗಡ್ಡೆಯೊಂದಿಗೆ ಸಹ ಹೇಗೆ ಎತ್ತಿಕೊಂಡು ಹೋಗಿದ್ದೇನೆ? ಸೀತೆಯನ್ನು ಎತ್ತುವ ಬಲವಿರುವ ನಾನು ಸೀತೆ ಎತ್ತಿದ ಒಂದು ವಸ್ತುವನ್ನು ಎತ್ತಲಾರೆನಾ? ಸೀತೆಯನ್ನು ಎತ್ತಿಕೊಂಡು ಹೋದ ಮಾತು ವಾಸ್ತವವೇ ಆದರೇ ಧನಸ್ಸನ್ನು ಕುರಿತು ಕವಿಗಳು ಎಣೆದ ಸಮಾಚಾರವೆಲ್ಲಾ ಕಲ್ಪಿತ.

ರಾವಣನಿಗೆ ಹತ್ತು ತಲೆಗಳಿವೆಯೆನ್ನುವುದು ಪೂರ್ತಿ ಅಸತ್ಯ. ನನಗೆ ಹತ್ತು ತಲೆಗಳು ಇಲ್ಲ. ಆದರೆ ಹತ್ತು ತಲೆಗಳಿಗಿರುವಷ್ಟು ಬುದ್ಧಿ, ಜ್ಞಾನ ಇರುವವನಾದ್ದರಿಂದ ಆದಿನ ನನ್ನನ್ನು ದಶಕಂಠನು ಎಂದಿದ್ದಾರೆ. ಸೂಕ್ಷ್ಮವಾಗಿ ದಶಕಂಠನೇ ಆದರೇ ಭೌತಿಕವಾಗಿ ಎಲ್ಲರಿಗಿರುವಂತೆ ಒಂದು ತಲೆ ಮಾತ್ರ ಇದೆ. ಕಾಣಿಸುತ್ತಿರುವ ಒಂದು ತಲೆಯನ್ನು ಬಿಟ್ಟು ರಾಮನಿಗೆ ಒಂದು, ರಾವಣನಿಗೆ ಹತ್ತು ಎನ್ನುವುದು ಅವಿವೇಕ ಅಲ್ಲವಾ!... ರಾವಣ ಎನ್ನುವ ಗಂಭೀರವಾದ ನಾಮಧೇಯವನ್ನು ಹೊಂದಿದ ನನ್ನನ್ನು ಅಸುರನೆಂದು ನನ್ನಲ್ಲಿ ಇಲ್ಲದ ಅಸುರತ್ವ ಕಾಣಿಸುವಂತೆ ರಾವಣಾಸುರನೆನ್ನುವುದು ಭಾವ್ಯವಾ!...

ಹತ್ತು ತಿಂಗಳ ಕಾಲ ನನ್ನ ಅಧೀನದಲ್ಲಿರುವ ಸೀತಾದೇವಿಗೆ ಎಂತಹ ಅಸೌಕರ್ಯ ಇಲ್ಲದಂತಿರುವುದಕ್ಕೆ, ಒಬ್ಬಂಟಿತನ ತೋಚದಂತೆ, ಹತ್ತು ಮಂದಿ ಸ್ತ್ರೀಯರನ್ನು ಆಕೆಯ ಸೇವೆಗೆ ವಿನಿಯೋಗಿಸಿದ್ದೇನೆ. ರಾವಣನು ನನ್ನನ್ನು

ಅಸಭ್ಯವಾಗಿ ಮಾತನಾಡಿದ್ದಾನೆಂದಾಲಿ, ಹಾಗೆ ಪ್ರವರ್ತಿಸಿದ್ದಾನೆಂದಾಗಲೀ, ಸೀತಾದೇವಿ ಯಾರೊಂದಿಗೂ ನನ್ನನ್ನು ಕುರಿತು ಹೇಳಲಿಲ್ಲ. ಅರಣ್ಯದಿಂದ ಆಕೆಯನ್ನು ಲಂಕೆಗೆ ತೆಗೆದುಕೊಂಡು ಬರುವಾಗ ಕೂಡಾ ಸೀತೆಯನ್ನು ತಾಕದಂತೆ ಭೂಮಿಯೊಂದಿಗೆ ಸಹ (ಎತ್ತಿಕೊಂಡು) ತಂದಿದ್ದೇನೆ. ನನ್ನಲ್ಲಿ ಪರಕಾಂತ ವ್ಯಾಮೋಹವಿದ್ದರೂ, ನಾನು ಕಾಮಾಂಧನಾದರೂ, ಒಬ್ಬಂಟಿಯಾಗಿ ಸಿಕ್ಕಿದ ಅಬಲೆಯನ್ನು ಮಾನಭಂಗ ಮಾಡುತ್ತಿದ್ದೆನಲ್ಲಾ!.... ಹಾಗೆ ಮಾಡಲಿಲ್ಲ ಅಲ್ಲವೇ!... ಕೈಲಾಗದಿರುವುದಕ್ಕಾ! ಧರ್ಮ ತಿಳಿದಿದೆ ಆದ್ದರಿಂದ ಹಾಗೆ ಮಾಡಲಿಲ್ಲ. ನನ್ನ ಹೆಂಡತಿ ಮಂಡೋದರಿ ದೇವಿಗೆ ಸಹ ಸೀತೆಯನ್ನು ಯಾವ ಉದ್ದೇಶದಿಂದ ತಂದಿದ್ದೇನೋ ತಿಳಿದಿದೆ. ತ್ರಿಕಾಲ ಜ್ಞಾನಿಯಾದ ನಾನು ನನ್ನ ಮರಣ ಶ್ರೀರಾಮನ ಕೈಯ್ಯಲ್ಲಿ ಲಂಕೆಯಲ್ಲೇ ಇದೆಯೆಂದು, ಆದ್ದರಿಂದ ರಾಮನನ್ನು ಲಂಕೆಗೆ ಕರೆಯಿಸುವುದಕ್ಕಾಗಿ ಸೀತೆಯನ್ನು ತರುತ್ತಿದ್ದೇನೆಂದು, ಮೊದಲೇ ನನ್ನ ಹೆಂಡತಿ ಮಂಡೋದರಿ ದೇವಿಗೆ ಹೇಳಿದ್ದೇನೆ. ಮುಂಬರುವ ಭವಿಷ್ಯತ್ತು ತಿಳಿದ ನಾನು ದೊಡ್ಡವನಾ! ಮುಂದೆ ಏನು ನಡೆಯುತ್ತದೋ ತಿಳಿಯದೆ, ಚಿನ್ನದ ಜಿಂಕೆ ಇರುತ್ತದಾ ಎಂದು ಯೋಚಿಸದೇ, ಅಡವಿಯೊಳಗೆ ಹೋದ ರಾಮನು ದೊಡ್ಡವನಾ!... ಈ ವಿಷಯದಲ್ಲಾದರೂ ರಾಮನಿಗೆ ಒಂದು ತಲೆ ಬುದ್ಧಿ, ರಾವಣನಿಗೆ ಹತ್ತು ತಲೆಗಳ ಬುದ್ಧಿ ಇದೆಯೆಂದು ಈಗಾದರೂ ಒಪ್ಪಿಕೊಳ್ಳದೆ ತಪ್ಪುವುದಿಲ್ಲ.

ಸೀತೆಯನ್ನು ನಾನು ಮಗಳಹಾಗೆ ಆದರಿಸಿದರೇ, ಆ ವಿಷಯವನ್ನೇ ಸೀತಾದೇವಿ ರಾವಣಬ್ರಹ್ಮ ನನ್ನನ್ನು ಮಗಳಂತೆ ನೋಡಿಕೊಂಡಿದ್ದಾನೆಂದು ಹೇಳಿದರೂ, ರಾಮನು ಸೀತೆಯನ್ನು ಅನುಮಾನಿಸಿ ಅಗ್ನಿ ಪರೀಕ್ಷೆಗೆ ನಿಲ್ಲಿಸುವುದು ಸ್ತ್ರೀ ಜಾತಿಯನ್ನು ಅವಮಾನಿಸಿದಂತೆ ಅಲ್ಲವೆ!... ಈ ವಿಷಯವನ್ನು ನೋಡಿದರೇ ಸ್ತ್ರೀಯರ ಬಗ್ಗೆ ಅಗೌರವವಾಗಿ ಪ್ರವರ್ತಿಸಿದವನು ರಾಮನಾ? ರಾವಣನಾ? ಯಾರಾದರೂ ರಾಮನೆಂದೇ ಮೊದಲು ಹೇಳದೆ ತಪ್ಪುವುದಿಲ್ಲ.

ರಾಮನು ಅಶ್ವಮೇಧಯಾಗವನ್ನು ಮಾಡಿ ಅಶ್ವವನ್ನು ಬಿಟ್ಟಾಗ, ರಾಮನು ಸ್ವತಃ ತಮಗೆ ತಂದೆಯೆಂದು ತಿಳಿಯದ ಲವಕುಶರು, ಅಶ್ವವನ್ನು ಬಂಧಿಸಿದಾಗ, ಅವರ ಕೈಯ್ಯಲ್ಲಿ ರಾಮನ ಸೈನ್ಯ ಸೋತುಹೋದಾಗ, ಮೊದಲು ಲಕ್ಷ್ಮಣನು, ಆ ನಂತರ ರಾಮನು ಲವಕುಶರ ಹತ್ತಿರಕ್ಕೆ ಹೋದಾಗ, ಲವಕುಶರು ರಾಮನೊಳಗಿನ ಲೋಪಗಳೆಲ್ಲವನ್ನು ಹೊರಗಿಟ್ಟು, ದುರ್ಭಾಷೆಗಳಾಡಿದ ವಿಷಯ ಪ್ರಜೆಗಳಿಗೆ ತಿಳಿದಿಲ್ಲವಾ! ಸ್ವಂತ ಕುಮಾರರೇ ರಾಮನನ್ನು ಒಪ್ಪಿಕೊಳ್ಳಲಿಲ್ಲವೆಂದು ಪ್ರಜೆಗಳಿಗೆ ತಿಳಿದಿಲ್ಲವಾ! ಆ ಸಂದರ್ಭದಲ್ಲಿಯೇ ಸೀತೆ ಅಲ್ಲಿಗೆ ಬಂದಾಗ, ಲವಕುಶರು ತನ್ನ ಕುಮಾರರೇಯೆಂದು ತಿಳಿದುಕೊಂಡ ರಾಮನು, ಸೀತೆಯನ್ನು ಪುನಃ ಅಯೋಧ್ಯೆಗೆ ಕರೆದಾಗ, ನಿನ್ನ ಕೈಯ್ಯಲ್ಲಿ ಅವಮಾನ ಪಾಲಾಗಿ ಅಡವಿಯಲ್ಲಿ ಬಿಟ್ಟ ನಂತರ ಕೂಡ ಪುನಃ ಬಂದು ನಿನ್ನೊಂದಿಗೆ ನಾನು ಹೇಗೆ ಸಂಸಾರ ಮಾಡುವುದೆಂದು, ಹಾಗೆ ಮಾಡುವುದಕ್ಕಿಂತ ಸಾಯುವುದು ಒಳ್ಳೆಯದೆಂದು, ಸೀತಾದೇವಿ ಬೆಟ್ಟದ ಮೇಲಿಂದ ಹಾರಿ ಆತ್ಮಹತ್ಯೆ ಮಾಡಿಕೊಳ್ಳುವುದು ಪ್ರಜೆಗಳಿಗೆ ತಿಳಿದಿಲ್ಲವಾ! ಅಲ್ಲಿಯವರೆಗು ಪ್ರಾಣಗಳೊಂದಿಗೆ ಇರುವ ಆಕೆ ಆ ದಿನವೇ ಏಕೆ ಇಲ್ಲದಂತೆ ಹೋಗಿದ್ದಾಳೋ ತಿಳಿದಿದೆಯಾ? ಅಲ್ಲಿಯತನಕ ಅಡವಿಯಲ್ಲಿ ಒಬ್ಬ ಅಭಾಗ್ಯಳಾಗಿ ಬದುಕಿದ ಸೀತೆ, ಇನ್ಮುಂದೆ ರಾಮನ ಹೆಂಡತಿಯಾಗಿ ಬದುಕಬೇಕೆಂದುಕೊಂಡಿಲ್ಲ ಆದ್ದರಿಂದ, ಪುನಃ ರಾಮನ ಹೆಂಡತಿ ಎನಿಸಿಕೊಳ್ಳುವುದು ಇಷ್ಟವಿಲ್ಲ ಆದ್ದರಿಂದ, ಪ್ರೇಮ ಇಲ್ಲದ ರಾಮನ ಹತ್ತಿರ ಬದುಕುವುದು ನರಕ ಆದ್ದರಿಂದ, ಇದೆಲ್ಲಾ ಪ್ರಜೆಗಳಿಗೆ ತಿಳಿದಿಲ್ಲವಾ! ತಿಳಿದ ನಂತರ ಕೂಡ ರಾಮನನ್ನು ದೇವರಾಗಿ, ನನ್ನನ್ನು ರಾಕ್ಷಸನಾಗಿ ವರ್ಣಿಸಿ ಪ್ರಜೆಗಳನ್ನು ತಪ್ಪು ದಾರಿ ಹಿಡಿಸಿದ ಕವಿಗಳು ಎಂತಹವರೋ ನೀವೇ ಯೋಚಿಸಿರಿ.

ಅಪರಬ್ರಹ್ಮನೆಂದೂ, ಬ್ರಹ್ಮಜ್ಞಾನಿಯೆಂದೂ, ರಾವಣಬ್ರಹ್ಮನೆಂದೂ ಹೆಸರುಪಡೆದ ನನಗೆ ಯಜ್ಞಗ್ಗಳೆಂದರೆ ಏನೋ ತಿಳಿದಿಲ್ಲವಾ! ಬಾಹ್ಯಯಜ್ಞಗಳು ಧರ್ಮ ವಿರುದ್ಧಗಳೆಂದು, ದೇವರ ಮಾರ್ಗಕ್ಕೆ ಆತಂಕಗಳೆಂದು, ಅಧರ್ಮಗಳಾದ ಯಜ್ಞಗಳನ್ನು ಕೆಡಿಸಿದ ನಾನು ಧರ್ಮಪರನಾ ಅಥವಾ ಯಜ್ಞಗಳನ್ನು

ಕಾಪಾಡಬೇಕೆಂದುಕೊಂಡ ರಾಮನು ಧರ್ಮಪರನಾ! ಅಧರ್ಮಗಳನ್ನು ಕಿತ್ತೆಸೆಯುವುದಕ್ಕೆ ದೇವರು ಭೂಮಿಮೇಲೆ ಬರುತ್ತೇನೆಂದು ಗೀತೆಯಲ್ಲಿ ಹೇಳಲಿಲ್ಲವಾ! ದ್ವಾಪರಯುಗದಲ್ಲಿ ಗೀತೆಯಲ್ಲಿ ಯಜ್ಞಗಳಿಂದ ನಾನು ತಿಳಿಯುವುದಿಲ್ಲವೆಂದು ಹೇಳಿದ ಧರ್ಮದ ಪ್ರಕಾರವೇ ನಾನು ತ್ರೇತಾಯುಗ ದಲ್ಲಿಯೇ, ಅಧರ್ಮಗಳಾದ ಯಜ್ಞಗಳನ್ನು ನಾಶ ಮಾಡಿದ್ದೇನೆ. ಆ ದಿನವೇ ಧರ್ಮಪರನು, ಬ್ರಹ್ಮಜ್ಞಾನಿ ಎನಿಸಿಕೊಂಡಿದ್ದೇನೆ. ಭಗವದ್ಗೀತೆಗೆ ಅನುಕೂಲವಾಗಿ ನಡೆದವನು ನಾನು, ಭಗವದ್ಗೀತೆಗೆ ವಿರುದ್ಧವಾಗಿ ನಡೆದವನು ರಾಮನು. ರಾಮನು ಧರ್ಮಪರನು, ರಾವಣನು ಅಧರ್ಮಪರನೆಂದುಕೊಂಡ ಈ ಕಾಲದ ಕುರುಡು ಪ್ರಜೆಗಳನ್ನು ಕೇಳುತ್ತಿದ್ದೇನೆ. ಈಗ ಹೇಳಿ ಯಾರು ಧರ್ಮಪರನೋ, ಯಾರು ಅಧರ್ಮಪರನೋ.

ಧರ್ಮದ ಪ್ರಕಾರ ಯಜ್ಞಗಳನ್ನು ನಾಶ ಮಾಡಿದ ನನ್ನನ್ನು ದುರ್ಮಾರ್ಗನೆಂದು ಪ್ರಜೆಗಳಿಂದ ನಂಬಿಸಿ, ಅವರ ಭುಕ್ತಿಗೋಸ್ಕರ ರಾಜರ ಹತ್ತಿರ ಧನವನ್ನು ತೆಗೆದುಕೊಂಡು ಯಜ್ಞ ಮಾಡುವುದು, ದ್ವಾಪರಯುಗದಲ್ಲಿ ಬೆಳೆದುಹೋಗುವುದನ್ನು ಗಮನಿಸಿದ ದೇವರು ತಾನೇ ಶ್ರೀ ಕೃಷ್ಣನಾಗಿ ಭೂಮಿಮೇಲೆಗೆ ಬಂದಿದ್ದಾನೆ.

**ಶ್ಲೋ ॥ ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥**

ಯಾವಾಗಾದರೇ ಧರ್ಮಗಳಿಗೆ ಮುಪ್ಪು ಉಂಟಾಗುತ್ತದೋ ಆಗಲೇ ನಾನು ಭೂಮಿಮೇಲೆ ಅವತರಿಸುತ್ತೇನೆಂದು ಹೇಳಿದ ದೇವರು, ವ್ಯಾಸನು ಮುಂತಾದ ಮಹರ್ಷಿಗಳೆಂದು ಹೆಸರುಪಡೆದವರಿರುವಾಗಲೇ ಭೂಮಿಮೇಲೆ ಅವತರಿಸಿದ್ದಾನೆ. ಇದನ್ನನುಸರಿಸಿ ಯಜ್ಞಗಳು ಹೆಚ್ಚಾಗಿ ಮಾಡುವ ಮಹರ್ಷಿಗಳು ಅಧರ್ಮಪರರೆಂದೇ ಅಲ್ಲವೆ ಅರ್ಥ! ಇದನ್ನನುಸರಿಸಿ ಯಜ್ಞಗಳನ್ನು ರಕ್ಷಿಸಿದವನು ಧರ್ಮಪರನಾ? ಯಜ್ಞಗಳನ್ನು ಕೆಡಸಿದವನು ಧರ್ಮಪರನಾ? ಯಾರು ಧರ್ಮಪರನೋ ಯೋಚಿಸಿರಿ.

ಇನ್ನು ನಾನು ಅಜ್ಞಾನಿಯೆಂದು, ದೈವಶಕ್ತಿ ಯಾವ ಮಾತ್ರ ಇಲ್ಲದವನೆಂದು, ಸುಂದರಕಾಂಡಯೆಂದು ಹೆಸರಿಟ್ಟು ಹಾಡು ಹಾಡುವವರು ಸಹ ಇದ್ದಾರೆ. ಪರಬ್ರಹ್ಮ ಸ್ವರೂಪವಾದ, ಪುರುಷೋತ್ತಮನಿಗೆ ಬದಲಿ ರೂಪವಾದ ಈಶ್ವರಲಿಂಗವನ್ನು ಪೂಜಿಸಿದ್ದೇನೆ, ಆದರೆ ಅನ್ಯದೇವತೆಯನ್ನು ಎಲ್ಲೂ ನಾನು ಆರಾಧಿಸಲಿಲ್ಲ! ದೇವರಿಗೆ ಅನ್ಯವಾಗಿರುವ ದೇವತೆಗಳನ್ನು, ಸೂರ್ಯನನ್ನು ಆರಾಧಿಸಿದ ಘನತೆ ರಾಮನಿಗಿದೆಯೇ ಹೊರತು, ನನಗೆ ಇಲ್ಲ! ವಿಶ್ವವೆಲ್ಲಾ ವ್ಯಾಪಿಸಿದ ಈಶ್ವರನಾದ ಪರಮಾತ್ಮನನ್ನು ಆರಾಧಿಸಿದ ನಾನು ದೈವಭಕ್ತಿ ಇಲ್ಲದವನಾ!

ನನ್ನ ಮರಣದ ಮುಹೂರ್ತ ತಿಳಿದ ನಾನು ಯುದ್ಧರಂಗದಲ್ಲಿ ಹಗಲುಹೊತ್ತು ಸೂರ್ಯಕಾಂತಿ ಬೀಳುವ ಮಿಟ ಮಧ್ಯಾಹ್ನ, ಶುಕ್ಲಪಕ್ಷದಲ್ಲಿ, ಉತ್ತರಾಯಣದಲ್ಲಿ ಮರಣಿಸಿ, ವಿಶ್ವವ್ಯಾಪ್ತನಾಗಿ ಎಲ್ಲ ನೋಡುತ್ತಿದ್ದೇನೆ. ತ್ರೇತಾಯುಗದಲ್ಲಿ ನಾನು ಆತಂಕಪಡಿಸಿದ ಯಜ್ಞಗಳು ಇಂದಿಗೂ ಸಾಗುತ್ತಿರುವುದೇ ಅಲ್ಲದೆ, ನನ್ನನ್ನು ಅಧರ್ಮಪರನೆಂದು ಅನ್ನುವುದೇ ಅಲ್ಲದೆ, ಯಜ್ಞಗಳು, ವೇದಗಳು, ತಪಸ್ಸುಗಳು ಅಧರ್ಮಗಳೆಂದ ಗೀತೆಯನ್ನು ಕೂಡಾ ಯಾರೂ ಹಿಡಿಸಿಕೊಳ್ಳಲಿಲ್ಲ. ಆದ್ದರಿಂದ ಅಂದಿನ ರಾವಣ ಬ್ರಹ್ಮನಾಗಿ ನೀವು ಪ್ರಯಾಣಿಸುವ ಮಾರ್ಗ ಯಾವುದೋ ತಿಳಿದಿದೆಯಾ? ಎಂದು ಕೇಳುತ್ತಿದ್ದೇನೆ. ನಾನು ಆಶಿಸಿದ ಸಮಾಜವೇನಾ ಇದು? ಎಂದು ಪ್ರಶ್ನಿಸುತ್ತಿದ್ದೇನೆ. ಮಾಯಾ ಪ್ರಭಾವದಿಂದ ನಿಜ ತಿಳಿಯದೆ ಮೋಸಹೋಗಿ, ರಾವಣನು ದುರ್ಮಾರ್ಗನೆಂದು, ಕೊಬ್ಬುಹಿಡಿದ ಕಾಮಾಂಧನೆಂದು, ಲೋಕಕಂಠಕನೆಂದು ಪ್ರಚಾರ ಮಾಡುವ ಎಷ್ಟೋ ಸ್ವಾಮಿಗಳನ್ನು, ಮಠಾಧಿಪತಿಗಳನ್ನು, ಪೀಠಾಧಿಪತಿಗಳನ್ನು, ಪರಮಹಂಸರನ್ನು, ಮಹರ್ಷಿರನ್ನು, ಜ್ಞಾನದ ಮುಸುಗು ಹಾಕಿಕೊಂಡ ಮಾಯಾ ಗುರುಗಳನ್ನು ಪ್ರಶ್ನಿಸುತ್ತಿದ್ದೇನೆ. ಸ್ವಾಮಿ, ಮಹರ್ಷಿ ಎನ್ನುವ ಪದಕ್ಕೆ ಅರ್ಥ ನಿಮಗೆ ತಿಳಿದಿದೆಯಾ? ತೃಪ್ತಿಯಾಗಿ, ರುಚಿಕರವಾದ ಭೋಜನ ಮಾಡುತ್ತಾ ಕಷ್ಟವೆನ್ನುವುದು ಇಲ್ಲದೆ ಸುಖಗಳಿಗೆ ಒಳಗಾಗಿ ಮೈ ಬೆಳಸಿಕೊಂಡ ನಿಮಗಾ ಕೊಬ್ಬು ಹಿಡಿದಿರುವುದು?

ಅಥವಾ ಪರಾಕ್ರಮವಂತನಾಗಿ ಯುದ್ಧ ರಂಗದಲ್ಲಿ ಅರಿವೀರ ಭಯಂಕರನಾಗಿ ವಿಜೃಂಭಿಸಿದ ನನ್ನಂತಹ ವೀರನಿಗಾ? ಮಾನವನನ್ನು ದೈವತ್ವದಕಡೆ ತೆಗೆದುಕೊಂಡು ಹೋಗಬೇಕಾದ ಕಾಳಜಿ ಇರುವ ನೀವು, ಕೆಲಸಕ್ಕೆ ಬಾರದ ಪ್ರವಚನೆಗಳು, ಕಟ್ಟು ಕಥೆಗಳು, ಅಶಾಸ್ತ್ರೀಯವಾದ ಆಗಮ ಶಾಸ್ತ್ರದ ಚರ್ಚೆಗಳು, ಪುಕ್ಕಟೆ ಪುರಾಣಗಳೊಂದಿಗೆ ಕಾಲಕ್ಷೇಪ ಮಾಡುತ್ತಾ ಸೋಂಬೇರಿಗಳಾಗಿ, ಕರ್ಮ ಕ್ಷೇಪ ಮಾಡುವ ನೀವು, ನಿಜವಾದ ದೇವರ ಜ್ಞಾನವನ್ನು ಪ್ರಜೆಗಳಿಗೆ ತಿಳಿಸದೆ, ಅವರನ್ನು ಮಾಯಾ ಮಾರ್ಗದಲ್ಲಿ ನಡೆಸುತ್ತಿದ್ದೀರ. ಇದಕ್ಕೆ ಸರಿಯಾದ ಪ್ರತಿಫಲ ನೀವು ತಪ್ಪದೆ ಅನುಭವಿಸುವಿರಿ! ದೈವನಿಂದನೆ ಮಾಡಿದವರಿಗೆ ಜ್ಞಾನದ ದಡಕೂಡಾ ಸಿಗದಂತೆ ಮಾಡುತ್ತೇನೆಂದು ದೇವರು ಹೇಳಿದ ಪ್ರಕಾರ, ಮರುಜನ್ಮ ದಲ್ಲಾದರೂ ನೀವು ಈ ಭೂಲೋಕದಲ್ಲಿ ಬರಗಾಲಗಳಿಗೆ ನಿಲಯವಾದ ಆಫ್ರಿಕಾ ಖಂಡದಲ್ಲಿ ಹುಟ್ಟಿ ಎಲೆಗಳು, ಗಿಡಮೂಲಿಕೆಗಳು ತಿನ್ನುತ್ತಾ ಹಸಿವಿಗೆ ತಡಿಯ ಲಾರದೆ ಕೊನೆಗೆ ಹಸಿ ಅಳಿಲನ್ನು, ಹಸಿ ಮಿಡತೆಗಳನ್ನು, ಓತಿಕ್ಯಾಟಗಳನ್ನು ತಿನ್ನುತ್ತಾ ದುರ್ಭರವಾದ ಜೀವನವನ್ನು ಕಳೆಯುತ್ತೀರಾ! ನಿಮ್ಮ ಕೊಬ್ಬು ಕರಗಲಿ! ಇದೇ.... ಮೋಕ್ಷದೊಂದಿಗೆ ದೈವತ್ವವನ್ನು ಹೊಂದಿದ ನನ್ನೊಂದರ ಶಾಪ.... ಆ ಪರಮಾತ್ಮ ಈ ಮಾಯಾ ಗುರುಗಳಿಗೆ ವಿಧಿಸುವ ಶಿಕ್ಷೆ!

ಓ ಪ್ರಜೆಗಳೆ! ಇಂದಿಗಾದರೂ ಜ್ಞಾನನೇತ್ರ ತೆರೆದು, ನಿಜವಾದ ದೈವಜ್ಞಾನವನ್ನು ಗುರುತಿಸಿ, ಸ್ವಚ್ಛವಾದ ಹೇತುವಾದಿಗಳಾಗಿ, ಮಾಯಾ ಜ್ಞಾನವನ್ನು ಹೇಳುವವರನ್ನು ಪ್ರಶ್ನಿಸಿರಿ! ನಿಲ್ಲಿಸಿರಿ! ನಿಂತನಿಲುವಿಗೆ ಚರ್ಮ ಸುಲಿಯಿರಿ! ನಿಜವಾದ ದೈವಮಾರ್ಗವನ್ನು ಗುರುತಿಸಿ ಅದರಲ್ಲಿ ಎದುರಾಗುವ ಯಾವ ಆತಂಕಗಳನ್ನಾದರೂ ಎದುರಿಸಿರಿ.

**ಶ್ಲೋ ॥ ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ವನುಷ್ಠಿತಾತ್ ।**
**ಸ್ವಧರ್ಮೇನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥**

ಎಂದ ದೇವರ ಸಂದೇಶವೇ ಉಸಿರಾಗಿ ಜೀವಿಸಿರಿ.

**ಆಕಾಶವಾಣಿ :–** ಶಭಾಷ್ ರಾವಣಬ್ರಹ್ಮ! ನಾಯಿ ಕಡಿತಕ್ಕೆ ಚಪ್ಪಲಿ ಏಟು ಎನ್ನುವಂತೆ ನೀನು ಕೊಟ್ಟಿರುವ ಸಮಾಧಾನ ಈ ಮಾನವರಿಗೆ ಆಲೋಚಿಸುವಂತೆ ಮಾಡಲಿ! ನಿನ್ನನ್ನು ಕುರಿತು ಕೆಟ್ಟದಾಗಿ ಪ್ರಚಾರ ಮಾಡುವ ಮಾಯಾ ಗುರುಗಳಿಗೆ ಕೆನ್ನೆ ಪೆಟ್ಟು ಆಗಲಿ! ಇಂದಿಗಾದರೂ ಪ್ರಜೆಗಳಿಗೆ ನಿನ್ನ ಮೇಲೆ ಸದುದ್ದೇಶ ಉಂಟಾಗಲಿ!

**ರಾವಣಬ್ರಹ್ಮ :–** ನನ್ನನ್ನು ಕುರಿತು ಎಷ್ಟೋ ಜನ ಕೆಟ್ಟದಾಗಿ ಹೇಳಿಕೊಂಡರೂ, ನನ್ನ ನಿಜ ಸ್ವರೂಪವನ್ನು, ನನ್ನೊಂದರ ಪವಿತ್ರತೆಯನ್ನು ಎಂದೋ ಈ ಪ್ರಪಂಚಕ್ಕೆ ತಿಳಿಸಿದ **ಇಂದೂ ಧರ್ಮಪ್ರಧಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರಿಗೆ** ನನ್ನ ನಮಸ್ಕಾರಗಳು, ನಾನು ದೊಡ್ಡವನೆಂದು, ನನ್ನ ಜ್ಞಾನ ದೊಡ್ಡದೆಂದು, ನಾನು ಸ್ವಚ್ಛವಾದ ಧರ್ಮಪರನೆಂದು ತಿಳಿದು ಇಂದಿಗೂ ನನ್ನನ್ನು ಕುರಿತು ಹೇಳುವ **ಪ್ರಬೋಧ ಸೇವಾಸಮಿತಿ** ಅವರಿರುವ ಜಾಗಕ್ಕೆ ಬಂದಿದ್ದೇನೆ, ಮನಸ್ಸು ಬಿಚ್ಚಿ ಮಾತನಾಡಿದ್ದೇನೆ. ಯಜ್ಞಗಳು, ವೇದಗಳು, ದಾನಗಳು, ತಪಸ್ಸುಗಳು ದೇವರ ಧರ್ಮಗಳು ಅಲ್ಲವೆಂದು ಗೀತಾವಾಕ್ಯವನ್ನು ಗುರುತಿಟ್ಟುಕೊಂಡ ಅವರ ಹೃದಯಗಳಲ್ಲಿ ಎಂದಿಗೂ ಇರುತ್ತೇನೆ. ಇನ್ನು ಅಪ್ಪಣೆ...



# ಅಪ್ಪನ ಗಂಟು – ಅಮ್ಮನ ಗಂಟು

ಅದು ಭೂಲೋಕದಲ್ಲಿಯೇ ಯಮಧರ್ಮರಾಜನ ಕಾರ್ಯನಿರತ ಸಭೆ, ಮಧ್ಯದಲ್ಲಿ ಯಮಧರ್ಮರಾಜವೊಂದರ ಸಿಂಹಾಸನವಿರುವಾಗ ಪಕ್ಕದಲ್ಲೇ ಚಿತ್ರ ಗುಪ್ತನ ಆಸನ ಇರುತ್ತದೆ. ಅಲ್ಲಿ ಮೊದಲು ಇಬ್ಬರು ಯಮಕಿಂಕರರು, ಒಬ್ಬ ಪೊಲೀಸ್ ಅಧಿಕಾರಿಯನ್ನು, ಒಬ್ಬ ರಾಜಕೀಯನಾಯಕನನ್ನು, ಒಬ್ಬ ಬಡ್ಡೀ ವ್ಯಾಪಾರಸ್ತನನ್ನು, ಒಬ್ಬ ಉದ್ಯೋಗಸ್ಥನನ್ನು ತೆಗೆದುಕೊಂಡು ಬಂದು ಒಂದು ಕಡೆ ನಿಲ್ಲಿಸುತ್ತಾರೆ. ಬೇರೊಂದು ಕಡೆ ಆಧ್ಯಾತ್ಮಿಕತಜ್ಞನನ್ನು, ಒಬ್ಬ

ಶೈವನನ್ನು, ಒಬ್ಬ ವೈಷ್ಣವನನ್ನು ಕೂರಿಸಿದರು. ಅಷ್ಟರಲ್ಲಿ ಮೊದಲು ಚಿತ್ರಗುಪ್ತನು ಪ್ರವೇಶಿಸಿ ಯಮಕಿಂಕರರನ್ನು ನೋಡಿ...

**ಚಿತ್ರಗುಪ್ತ :–** ಕಿಂಕರರೇ ಈದಿನ, ಈ ಸಮಯದಲ್ಲಿ, ಈ ರಾಜ್ಯದಲ್ಲಿ ಆಯುಸ್ಸು ತೀರಿದವರು ಕೇವಲ ಏಳುಮಂದಿಯೇನಾ?

**ಕಿಂಕರರು :–** ಹೌದು ಚಿತ್ರಗುಪ್ತಾ! ಈ ಏಳುಮಂದಿ ಮಾತ್ರವೇ ಇದ್ದಾರೆ.

**ಚಿತ್ರಗುಪ್ತ :–** ಈ ನಾಲ್ವರನ್ನು ಒಂದು ಕಡೆ ನಿಲ್ಲಿಸಿ ಉಳಿದ ಮೂವರನ್ನು ಮತ್ತೊಂದು ಕಡೆ ಪ್ರತ್ಯೇಕವಾಗಿ ಕೂರಿಸಿದ್ದೀರ ಏಕೆ?

**ಕಿಂಕರರು :–** ಈ ನಾಲ್ವರು ಬೇರೆಬೇರೆ ಕೆಲಸಗಳು ಮಾಡುತ್ತಿದ್ದರೂ ಸರ್ವ ಸಾಧಾರಣ ಮನುಷ್ಯರೇ. ಪಕ್ಕದಲ್ಲಿರುವ ಈ ಮೂವರು ಜ್ಞಾನವನ್ನು ತಿಳಿದ ದೊಡ್ಡವರು, ಆದ್ದರಿಂದ ಪಕ್ಕದಲ್ಲಿ ಕೂರಿಸಿದ್ದೇವೆ.

**ಚಿತ್ರಗುಪ್ತ :–** ಇವರು ಯಾರಾಗಿರುವುದು, ಇವರು ಮಾಡಿದ ಪಾಪಗಳು, ಪುಣ್ಯಗಳು ಯಾವಾಗಿರುವುದು ಇವರ ಪಟ್ಟಿ ಎಲ್ಲಾ ಬರೆದುಕೊಂಡ ನಮಗೆ ತಿಳಿದಿದೆ, ಆದರೆ ಇವರಿಗೆ, ಇವರು ಮಾಡಿಕೊಂಡಿರುವವು ಯಾವುವೋ ತಿಳಿಯಬೇಕಲ್ಲವೆ! ಯಮಧರ್ಮರಾಜ ಬರುವುದಕ್ಕಿಂತ ಮೊದಲೇ ಇವರು ಭೂಮಿಮೇಲೆ ಸಂಪಾದಿಸಿಕೊಂಡಿರುವುದೇನೋ ಯಮಗುಪ್ತನಾಗಿ ನಾನು ತಿಳಿಸುವೆನು. ಹಾಗೇ ಮತ್ತೊಂದು ಕಡೆ ಇರುವ ಮೂವರು ಜ್ಞಾನಿಗಳ ವಿಷಯವನ್ನು ಯಮಧರ್ಮರಾಜನೇ ತಿಳಿಸುವನು. ಯಾರದು ಅವರಿಗೆ ತಿಳಿಯಬೇಕಲ್ಲವೆ! ಕೊನೆಯದಾಗಿ ಇವರು ಮಾಡಿದ ತಪ್ಪುಗಳನ್ನು ಹೇಳಬೇಕಾಗಿರುವುದು ಗುಪ್ತನಾದ ನಾನೂ, ಶಿಕ್ಷೆ ಹೇಳಬೇಕಾಗಿರುವುದು ಸಮವರ್ತಿ ಆದ ಯಮಧರ್ಮರಾಜ. ಇನ್ನು ಮೊದಲನೆಯದಾಗಿ ಉದ್ಯೋಗಸ್ಥನಾದ ರಾಮಾವತಾರ್‌ನ್ನು ಮೊದಲು ಹಾಜರು ಪಡಿಸಿರಿ. (ಯಮಕಿಂಕರರು ಒಂದು ಪಕ್ಕದಲ್ಲಿರುವ ನಾಲ್ವರಲ್ಲಿ ರಾಮಾವತಾರ್‌ನನ್ನು ತೆಗೆದುಕೊಂಡು ಬಂದು ಚಿತ್ರಗುಪ್ತನ ಮುಂದೆ ನಿಲ್ಲಿಸಿದರು.)

**ಚಿತ್ರಗುಪ್ತ :–** ಏನಯ್ಯಾ! ರಾಮಾವತಾರ್! ನಿನ್ನ ಹೆಸರು ಬಹಳ ಚೆನ್ನಾಗಿದೆ. ಆದರೆ ನಿನ್ನ ಜೀವನವೆಲ್ಲಾ ಲಂಚಾವತಾರ್‌ನಾಗಿ ಬದುಕಿದ್ದೀಯಲ್ಲಯ್ಯಾ! ಎಷ್ಟೋ ಜನರನ್ನು ಪೀಡಿಸಿ ಅವರ ಹತ್ತಿರ ತೆಗೆದುಕೊಂಡಿರುವುದು, ಹಣದರೂಪದಲ್ಲಿನ ಪಾಪವೆಂದು ಇಂದಿಗಾದರೂ ತಿಳಿದುಕೋ. ನಿನ್ನ ಮಗಳಿಗೆ ಕೊಟ್ಟಿರುವ ವರದಕ್ಷಿಣೆ, ನಿನ್ನ ಮೂವರು ಮಕ್ಕಳಿಗೆ ಹಂಚಿಕೊಟ್ಟ ಆಸ್ತಿಗಳು ಎಲ್ಲಾ ನೀನು ಉದ್ಯೋಗ ಮಾಡುತ್ತಾ ಲಂಚವಾಗಿ ತೆಗೆದುಕೊಂಡಿರುವವೇ. ಲಂಚ ತೆಗೆದುಕೊಂಡು ಕೆಲವರನ್ನು ಬಾಧೆ ಇಟ್ಟಿರುವ ಪಾಪ, ಲಂಚಕೊಡುವುದಕ್ಕೆ ತಮ್ಮ ಹತ್ತಿರ ಹಣ ಇಲ್ಲವೆಂದು ಹೇಳಿಕೊಂಡ ಹೆಂಗಸರನ್ನು ಬಲವಂತವಾಗಿ ಲಂಚಕ್ಕೆ ಬದಲು ಶೀಲವನ್ನು ಕದ್ದುಕೊಂಡ ಪಾಪ ದೊಡ್ಡವಾದಾಗ, ಮತ್ತೆಷ್ಟೋ ಪಾಪಗಳು ಇವೆ. ನೀನು ಮಾಡಿದ ಕೆಲಸಗಳು ಪಾಪಗಳಾಗಿ ನಿನ್ನ ಹಿಂದೆಯೇ ಇವೆ. ಅವುಗಳನ್ನು ಅನುಭವಿಸುವುದಕ್ಕೆ ಶಿಕ್ಷೆಯನ್ನು ಯಮಧರ್ಮರಾಜ ನಿರ್ಣಯಿಸಬಲ್ಲನು. ಕಿಂಕರರೇ! ಮತ್ತೊಬ್ಬನನ್ನು ಪ್ರವೇಶವಿಡಿರಿ. (ಕಿಂಕರರು ಬಡ್ಡೀ ವ್ಯಾಪಾರಸ್ಥನನ್ನು ಮುಂದಕ್ಕೆ ತಂದಿದ್ದಾರೆ.)

**ಚಿತ್ರಗುಪ್ತ :–** ಓಹೋ ಈತನು ಬಡ್ಡೀ ವ್ಯಾಪಾರಿ ಸುಬ್ಬಾನಾಯುಡುರವರಾ! ನೀನು ಮಾಡಿದ ಮೋಸಗಳು ಲೆಕ್ಕವಿಲ್ಲದಷ್ಟು ಪಾಪಗಳ ರೂಪದಲ್ಲಿ ಇವೆ. ಒಬ್ಬ ಮನುಷ್ಯನ ಅವಶ್ಯವನ್ನು ಆಸರೆಯಾಗಿ ತೆಗೆದುಕೊಂಡು, ಫೈನಾನ್ಸ್ ವ್ಯಾಪಾರವೆಂದು ಮೂರು ರೂಪಾಯಿಗಳ ಬಡ್ಡೀಯಿಂದ ಇಪ್ಪತ್ತು ರೂಪಾಯಿಗಳ ಬಡ್ಡೀವರೆಗು ಕೊಟ್ಟಿರುವ ಘನನು. ಎಷ್ಟೋ ಮಂದಿ ಹತ್ತಿರ ಆಸ್ತಿಗಳು, ಮನೆಗಳು ಬಡ್ಡೀಕೆಳಗೆ ಎಳೆದುಕೊಂಡ ಮಹಾನುಭಾವ. ಪ್ರಪಂಚದಲ್ಲಿ ಹಣಹೊರತು ಯಾವುದು ದೊಡ್ಡದಲ್ಲವೆಂದು, ಇತರರಿಗೆ ಕೂಡ ನೀತಿ ಹೇಳಿದವನು. ಹಣಕ್ಕಾಗಿ ನಿನ್ನ ಅಣ್ಣತಮ್ಮಂದಿರನ್ನು ಕೂಡ ಮೋಸ ಮಾಡಿದವನು. ನೀನೇ ಒಬ್ಬ ಸ್ವಾಮೀಜಿಯನ್ನು ತಯಾರು ಮಾಡಿ, ಆತನಿಂದ ಕೆಲವರಿಗೆ ನೀವು ಸಂಸಾರ ಮಾಡುವ ಮನೆ ಚೆನ್ನಾಗಿಲ್ಲವೆಂದು, ವಾಸ್ತುದೋಷವಿದೆಯೆಂದು ಬೇಗನೇ ಮಾರಲು ಹೇಳಿಸಿ, ಆ ಮನೆಯನ್ನು ಕಡಿಮೆ ರೇಟಿಗೆ ಕೊಳ್ಳುವುದು, ಹಾಗೆಯೇ

ಭೂಮಿಗಳನ್ನು ಕೂಡಾ ಮಾರಿಸಿ, ಅವುಗಳನ್ನು ನೀನೇ ಕೊಳ್ಳುವುದು ಮಹಾಪಾಪ ಗಳಾಗಿ ನಿನ್ನ ನೆತ್ತಿ ಮೇಲೆ ಕುಳಿತುಕೊಂಡಿವೆ. ನೀನು ಮರುಜನ್ಮದಲ್ಲಿ ಇದೇ ಭೂಮಿಮೇಲೆ ಏನು ಅನುಭವಿಸಬೇಕೋ ಯಮಧರ್ಮರಾಜನೇ ನಿರ್ಣ ಯಿಸಬಲ್ಲನು. ಕಿಂಕರರೇ! ಮತ್ತೊಬ್ಬನನ್ನು ಮುಂದಕ್ಕೆ ತನ್ನಿ (ಯಮ ಕಿಂಕರರು ಪೊಲೀಸ್ ಆಫೀಸರ್‌ನ್ನು ಮುಂದಕ್ಕೆ ತಂದಿದ್ದಾರೆ.)

**ಚಿತ್ರಗುಪ್ತನು :–** ಇನ್‌ಸ್ಪೆಕ್ಟರ್ ವೆಂಕಟೇಶ್ವರ್‌ರವರೆ! ಈಗ ನೀನು ಪೊಲೀಸ್ ಅಧಿಕಾರಿಯಲ್ಲ. ಸಾಧಾರಣ ಮನುಷ್ಯನೇ ಎಂದು ನೆನಪಲ್ಲಿಟ್ಟುಕೋ. ಉದ್ಯೋಗ ಬರುವುದಕ್ಕಿಂತ ಮೊದಲು ಯಾವ ಸಾಮರ್ಥ್ಯವಿಲ್ಲದ ನೀನು, ಉದ್ಯೋಗಕ್ಕೋಸ್ಕರ ಎಷ್ಟೋ ದೇವತೆಗಳಿಗೆ ಕೈಮುಗಿದಿದ್ದೀಯ. ಉದ್ಯೋಗಬಂದು ಸಬ್‌ಇನ್‌ಸ್ಪೆಕ್ಟರ್ ಆಗುತ್ತಲೇ, ನಾನು ಪೊಲೀಸ್ ಎನ್ನುವ ಗರ್ವವನ್ನು ತಲೆಗೇರಿಸಿಕೊಂಡಿದ್ದೀಯ. ಮನುಷ್ಯರನ್ನು ಹೀನವಾಗಿ ಪ್ರಾಣಿಗಳ ಕೆಳಗೆ ಜಮಕಟ್ಟಿದ್ದೀಯ. ಅಧಿಕಾರ ಮದದಿಂದ ತಪ್ಪು ಮಾಡದ ಮರ್ಯಾದಸ್ತರನ್ನು ದೂಷಿಸಿದ್ದೀಯ. ಆತ್ಮ ಜ್ಞಾನವಿರುವ ಗುರುವನ್ನು, ಅವರ ಶಿಷ್ಯರನ್ನು ತಪ್ಪು ಮಾಡದಿದ್ದರೂ ಅದೇ ಕೆಲಸದಂತೆ ದೂಷಿಸಿ ತಪ್ಪಿಲ್ಲದಿದ್ದರೂ ಕೇಸನ್ನು ದಾಖಲಿಸಿದ್ದೀಯ. ನಿನಗೆ ಯಾವ ಆತ್ಮಜ್ಞಾನ ತಿಳಿಯದಿದ್ದರೂ, ನಿಮ್ಮದು ಜ್ಞಾನವೇನಾ ಎಂದು ಗುರುವನ್ನೇ ನಿಂದಿಸಿ ಹೊಡೆಯುವುದಕ್ಕೆ ಮುನ್ನುಗ್ಗಿದ್ದೀಯ. ಉಳಿದ ಪಾಪಿಗಳಿಗಿಂತ ನಿನ್ನ ಪಾಪವೇ ಅಧಿಕ, ಯಮಧರ್ಮರಾಜ ನಿನ್ನನ್ನು ಯಾವ ವಿಧವಾಗಿ ಶಿಕ್ಷಿಸುತ್ತಾನೋ! ಇಂದಿಗಾದರೂ ನಿನ್ನ ಅಧಿಕಾರ, ನಿನ್ನ ಹುದ್ದೆ ಸ್ವಲ್ಪ ಕಾಲವೇಯೆಂದು, ನೀನು ಸಾಧಾರಣ ಜೀವಾತ್ಮನೇ ಎಂದು ತಿಳಿದುಕೋ. ಕಿಂಕರರೇ ಕೊನೆಯದಾಗಿರುವ ಆತನನ್ನು ಕೂಡ ಪ್ರವೇಶಮಾಡಿರಿ. (ಯಮ ಕಿಂಕರರು ರಾಜಕೀಯ ನಾಯಕನನ್ನು ಮುಂದಕ್ಕೆ ತಂದಿದ್ದಾರೆ.)

**ಚಿತ್ರಗುಪ್ತ :–** ನೀವು ರಾಜಕೀಯದಲ್ಲಿನ ಮಂತ್ರಿವರ್ಯರು. ಅಧಿಕಾರವೇ ಎಲ್ಲದಕ್ಕಿಂತ ಮೀರಿರುವುದೆಂದು ತಿಳಿದಿದ್ದೀರ. ಅಧಿಕಾರವಿದ್ದರೇ ಹಣ ಅದಷ್ಟಕ್ಕದೇ ಬರುತ್ತದೆಂದು ತಿಳಿದಿದ್ದೀರ. ಅಧಿಕಾರಕ್ಕೋಸ್ಕರ ಎಷ್ಟೋ ಹತ್ಯೆಗಳು ಮಾಡಿಸಿದ್ದೀರ.

ಅಧಿಕಾರದಿಂದ ಎಷ್ಟೋ ಅಕ್ರಮಗಳು ಮಾಡಿದ ತಾವು, ಪಾಪವನ್ನು ಕೂಡ ಅದೇ ತರಹ ಸಂಪಾದಿಸಿಕೊಂಡಿದ್ದೀರ. ತಾವು ಮಾಡಿದ ಪಾಪಗಳು ಯಾವುವೂ ಚಿಕ್ಕವಲ್ಲ. ಅಧಿಕಾರವನ್ನು ಕಾಪಾಡಿಕೊಳ್ಳುವುದಕ್ಕೆ, ಪೊಲೀಸರಿಂದ ಬಹಳಜನರನ್ನು ಜೈಲುಗಳಿಗೆ ಕಳುಹಿಸಿದ್ದೀಯ. ಕೆಲವರಲ್ಲಿ ಗ್ರಾಮ ದ್ವೇಷಗಳನ್ನು ಬೆಳೆಸಿ ಹತ್ಯೆಗಳನ್ನು ಮಾಡಿಸಿದ್ದೀಯ. ಕೋಟಿಗಳ ಆಸ್ತಿಗಳು ಸಂಪಾದಿಸಿದ್ದೀಯ. ಆದರೂ ನಿನ್ನ ಹಿಂದೆ ಒಂದು ರೂಪಾಯಿ ಸಹ ಬರಲಿಲ್ಲ ಅಲ್ಲವೆ! ಈಗ ನಿನ್ನ ಹಿಂದೆ ಕೋಟಿ ರೂಪಾಯಿಗಳಿಗೆ ಸಮಾನವಾದ ಪಾಪ ಬಂದಿದೆ. ಅದನ್ನು ಅನುಭವಿಸುವುದಕ್ಕೆ ಒಂದು ಜನ್ಮ ಸರಿಹೋಗುವುದಿಲ್ಲ. ಈ ಭೂಮಿಯನ್ನು ಎಷ್ಟೋ ರಾಜರು ನಿನಗಿಂತ ದೊಡ್ಡದಾಗಿ ಪರಿಪಾಲಿಸಿದ್ದಾರೆ. ಒಬ್ಬನು ಕೂಡ ಹಿಡಿಕೆಯಷ್ಟು ಮಣ್ಣನ್ನು ಸಹ ಹಿಂದೆ ತೆಗೆದುಕೊಂಡು ಹೋಗಲಿಲ್ಲ. ನಿನ್ನ ನಂತರ ಕೂಡ ಎಷ್ಟೋ ಮಂದಿ ರಾಜಕೀಯದಲ್ಲಿ ಮಂತ್ರಿಗಳಾಗಿ ಇರಬಲ್ಲರು. ಅವರು ಕೂಡ ಅಷ್ಟೇ. ಯಾರೂ ಏನೂ ಮೂಟೆಕಟ್ಟಿಕೊಂಡು ಹೋಗುವುದಿಲ್ಲ, ಮೂಟೆಕಟ್ಟಿಕೊಂಡು ಹೋಗುವುದು ಪಾಪ ಮಾತ್ರವೇ. ನಿನ್ನ ಪಾಪದ ಮೂಟೆಗೆ ಸಮಾನವಾದ ಶಿಕ್ಷೆಯನ್ನು ಯಮಧರ್ಮರಾಜ ಹೇಳಬಲ್ಲನು. (ಅಷ್ಟರಲ್ಲಿ ಚಿತ್ರಗುಪ್ತನು ಮತ್ತೊಂದು ಕಡೆ ಇರುವ ಜ್ಞಾನಿಗಳ ಕಡೆ ನೋಡಿ) ನೀವು ಜ್ಞಾನಮಾರ್ಗದಲ್ಲಿ ಇರುವವರು, ನಿಮ್ಮ ಹುದ್ದೆಯನ್ನು ನಾನು ಗುರುತಿಸಲಾರೆನು. ನಿಮ್ಮ ಪಾಪ ಪುಣ್ಯಗಳನ್ನು ಸ್ವತಃವಾಗಿ ಯಮಧರ್ಮರಾಜನೇ ಹೇಳಬಲ್ಲನು. (ಅಷ್ಟರಲ್ಲಿ ಯಮ ಧರ್ಮರಾಜ ಸಭೆಯೊಳಗೆ ಬರುವ ಸೂಚನೆಯಾಗಿ ಶಬ್ದ ಕೇಳಿಸುತ್ತದೆ.) ಜೀವಾತ್ಮರಿಗೆ ಸಮವರ್ತಿಯಾದ, ಶರೀರಾಂತರ್ಗತ ಬಹಿರ್ಗತ ನಿವಾಸಿಯಾದ, ಮಾಯಯನ್ನು ತಿರುಗಿಸಿ ಬರೆದರೆ ಯಮಾ ಹೆಸರು ಹೊಂದಿದ, ದಂಡನಕರ್ತನಾದ ಕಾಲಯಮನು ಬರುತ್ತಿದ್ದಾನೆ. ಹುಷಾರ್! ಹುಷಾರ್!! ಹುಷಾರ್!!!

(ಆಗ ಯಮನು ಗಂಭೀರದಿಂದ ಸಭೆಯಲ್ಲಿ ಪ್ರವೇಶಿಸಿ ಸಿಂಹಾಸನದ ಮೇಲೆ ಕುಳಿತುಕೊಳ್ಳುವನು.)

**ಚಿತ್ರಗುಪ್ತ :–** ಸಮವರ್ತೀ! ಈ ಕಡೆ ಪಕ್ಕದಲ್ಲಿರುವ ಅವರು ಅಜ್ಞಾನ ಮಾರ್ಗದಲ್ಲಿ ನಡೆದವರು. ಒಬ್ಬರು ಪೊಲೀಸ್ ಅಧಿಕಾರಿ, ಒಬ್ಬರು ಬಡ್ಡೀವ್ಯಾಪಾರಿ, ಒಬ್ಬರು ಉದ್ಯೋಗಸ್ಥನು, ಒಬ್ಬರು ರಾಜಕೀಯ ಮಂತ್ರಿರವರು ಇದ್ದಾರೆ. ಇವರ ಪಾಪಗಳನ್ನು ನಾನು ಬರೆದಿದ್ದೇನೆ, ಆದ್ದರಿಂದ ಕೆಲವನ್ನು ಮಾತ್ರ ಅವರಿಗೆ ನೆನಪು ಮಾಡಿದ್ದೇನೆ. ಆ ಕಡೆ ಇರುವವರು ಜ್ಞಾನಮಾರ್ಗದಲ್ಲಿ ನಡೆದವರು, ಅವರ ಕರ್ಮಗಳನ್ನು ನೋಡುವವನು ನೀನೇ ಆದ್ದರಿಂದ ಅವರನ್ನು ಪಕ್ಕದಲ್ಲಿಟ್ಟಿದ್ದೇವೆ.

**ಯಮ :–** ಅಜ್ಞಾನಮಾರ್ಗದಲ್ಲಿ ನಡೆದು ಅಮ್ಮಗಂಟನ್ನು ಸಂಪಾದಿಸಿ ಕೊಂಡವರನ್ನು ಒಂದು ಕಡೆಗೆ, ಜ್ಞಾನಮಾರ್ಗದಲ್ಲಿ ನಡೆದು ಅಪ್ಪನ ಗಂಟನ್ನು ಸಂಪಾದಿಸಿಕೊಂಡವರನ್ನು ಮತ್ತೊಂದು ಕಡೆಗೆ ಇಡುವುದು ಒಳ್ಳೆಯದೇ. ಆದರೇ ನಾನು ನೋಡಬೇಕಾದ ಈ ಮೂವರಲ್ಲಿ ಸಹ, ಅಪ್ಪನ ಗಂಟನ್ನು ಸಂಪಾದಿಸಿಕೊಂಡವರಿಲ್ಲ. ಅದರಲ್ಲಿ ಒಬ್ಬರು ಮಾತ್ರ ನೀನಂದುಕೊಂಡ ಹಾಗೆ ಪೂರ್ತಿ ಜ್ಞಾನ ಮಾರ್ಗದಲ್ಲಿ ನಡೆದವನಿದ್ದಾನೆ. ಉಳಿದ ಇಬ್ಬರು ಇತ್ತ ಪೂರ್ತಿ ಅಮ್ಮನ ಗಂಟನ್ನು ಅಲ್ಲದೆ, ಅತ್ತ ಪೂರ್ತಿ ಅಪ್ಪನ ಗಂಟನ್ನು ಅಲ್ಲದೆ ಮಧ್ಯ ರೀತಿಯಲ್ಲಿದ್ದು, ಅಮ್ಮನಿಗಿಂತ ಸ್ವಲ್ಪ ಕಡಿಮೆಯಾದ ಚಿಕ್ಕಮ್ಮನ ಗಂಟನ್ನು ಸಂಪಾದಿಸಿಕೊಂಡಿದ್ದಾರೆ. ನೀವಂದುಕೊಂಡಹಾಗೆ ಇವರಿಬ್ಬರು ಅಪ್ಪನ ಗಂಟನ್ನು ಸಂಪಾದಿಸಿಕೊಳ್ಳಲಿಲ್ಲ, ಆದ್ದರಿಂದ ಅವರನ್ನು ಜ್ಞಾನಿಗೂ ಅಜ್ಞಾನಿಗೂ ಮಧ್ಯದಲ್ಲಿ ನಿಲ್ಲಿಸಿರಿ.

(ಯಮ ಭಟರು ಯಮಧರ್ಮರಾಜ ಹೇಳಿದಂತೆ ವೈಷ್ಣವನನ್ನು, ಶೈವನನ್ನು ಇಬ್ಬರನ್ನೂ ಮಧ್ಯದಲ್ಲಿ ನಿಲ್ಲಿಸಿದ್ದಾರೆ.)

**ಚಿತ್ರಗುಪ್ತ :–** ಯಮಾ! ಪ್ರಕೃತಿ ಸಂಬಂಧವಾದ (ಪ್ರಪಂಚ ಸಂಬಂಧವಾದ) ಧನವನ್ನು ಸಂಪಾದಿಸಿದವರು ಅಮ್ಮನ ಗಂಟು ಇರುವವರೆಂದು, ಪರಮಾತ್ಮ ಸಂಬಂಧ ಜ್ಞಾನ ಧನವನ್ನು ಸಂಪಾದಿಸಿದವರು ಅಪ್ಪನ ಗಂಟು ಇರುವವರೆಂದು

ನಮಗೆ ತಿಳಿದಿದೆ. ಆದರೆ ಅತ್ತ, ಇತ್ತ ಅಲ್ಲದ ಚಿಕ್ಕಮ್ಮನ ಗಂಟನ್ನು ಸಂಪಾದಿಸಿದವ ರೆಂದರೆ, ನಮಗೆ ಅರ್ಥವಾಗಲಿಲ್ಲ ಪ್ರಭೂ! ನನಗೇ ಅರ್ಥ ವಾಗದಿರುವುದು ಇವರಿಗೇನು ತಿಳಿಯುತ್ತದೆ, ಆದ್ದರಿಂದ ಇವರಿಗೂ ನನಗೂ ಅರ್ಥವಾಗುವಂತೆ, ಧರ್ಮಗಳನ್ನು ತಿಳಿದ ನೀವೇ ತಿಳಿಸಿರೆಂದು ಕೋರುತ್ತಿದ್ದೇವೆ.

**ಯಮ :–** ಚಿತ್ರಗುಪ್ತಾ! ಅಮ್ಮನಂತವಳೇ ಅಮ್ಮನ ತಂಗಿಯೇ ಚಿಕ್ಕಮ್ಮ. ಹಾಗೆಯೇ ಪ್ರಕೃತಿಯಂತಹುದೇ ಪ್ರಕೃತಿ ಭಾವನೆಗಳಿರುವುದೇ ಮತ್ತೊಂದು ದೇವತೆಗಳ ಭಕ್ತಿಯನ್ನು ಚಿಕ್ಕ ಪ್ರಕೃತಿ ಎಂದುಕೊಳ್ಳಿ. ಪ್ರಕೃತಿಯನ್ನು ಕೋಗಿಲೆಯಾಗಿ, ದೇವತಾಪ್ರಕೃತಿಯನ್ನು ಕಾಗೆಯಾಗಿ ಹೋಲಿಸಿ ಹೇಳುತ್ತೇವೆ ಕೇಳು. ‘ಕುಹೂ’ ಎಂದು ಕೂಗುವುದು ಕಪ್ಪನೆಯ ಕೋಗಿಲೆ, ಹಾಗೆಯೇ ‘ಕಾವು’ ಎಂದು ಅರಚುವುದು ಕಪ್ಪನೆಯ ಕಾಗೆ. ಕೋಗಿಲೆಯಂತಾದ್ದು ಕಪ್ಪನೆಯದೇ ಕಾಗೆ, ಆದರೆ ಅದರ ಕೂಗಿನಲ್ಲಿ, ಇದರ ಕೂಗಿನಲ್ಲಿ ಸ್ವಲ್ಪ ವ್ಯತ್ಯಾಸ ಇರುತ್ತದೆ. ಕೋಗಿಲೆ ‘ಕು’ ಎಂದರೇ ಕಾಗೆ ‘ಕಾ’ ಎನ್ನುತ್ತದೆ. ಇನ್ನೊಂದು ವಿಷಯವೇನೆಂದರೇ, ಕೋಗಿಲೆ ತನ್ನ ಮೊಟ್ಟೆಗಳನ್ನು ಎಂದಿಗೂ ಮರಿ ಮಾಡುವುದಿಲ್ಲ. ಕಾಗೆಗಳು ಇಲ್ಲದಿರುವಾಗ ಕಾಗೆ ಗೂಡಿನಲ್ಲಿ ಕಾಗೆ ಇಟ್ಟಿರುವ ಮೊಟ್ಟೆಗಳ ಮಧ್ಯದಲ್ಲಿ, ಕೋಗಿಲೆ ತನ್ನ ಮೊಟ್ಟೆಗಳನ್ನು ಇಟ್ಟು ಬರುತ್ತದೆ. ಕಾಗೆ ತನ್ನ ಮೊಟ್ಟೆಗಳೊಂದಿಗೆ ತನ್ನ ಮೊಟ್ಟೆಗಳಂತೆ ಇರುವ ಕೋಗಿಲೆ ಮೊಟ್ಟೆಗಳನ್ನು ಗುರುತಿಸದೆ ಅದನ್ನು ಸಹ ಮರಿಗಳನ್ನು ಮಾಡುವುದರಿಂದ, ಕೋಗಿಲೆ ಚಿಕ್ಕಮ್ಮ ಎಂದು ಕಾಗೆಗೆ ಹೆಸರು ಬಂದಿದೆ. ಹಾಗೆಯೇ ಪ್ರಕೃತಿ ಭಾವನೆಗಳು ಕೋಗಿಲೆಯಂತೆ, ದೇವತೆಗಳ ಭಾವನೆ ಕಾಗೆಯಂತೆ ಇದೆ ಕಾಗೆ, ಕೋಗಿಲೆ ಎರಡೂ ಹೇಗೆ ಕಪ್ಪಾಗಿವೆಯೋ ಹಾಗೆಯೇ ಪ್ರಕೃತಿ ಭಾವನೆ, ದೇವತೆಗಳ ಭಾವನೆ ಎರಡು ಗುಣಗಳಾಗಿವೆ. ಪ್ರಪಂಚದಲ್ಲಿ ಬಂದಂತೇ, ದೇವತೆಗಳ ಮುಂದೆ ಕೂಡ ಕೋರಿಕೆ ಮುಂತಾದ ಗುಣಗಳೆಲ್ಲವೂ ವಿಜೃಂಭಿಸುತ್ತಿವೆ. ಆದ್ದರಿಂದ ಆಧ್ಯಾತ್ಮಿಕ ಎಂದು ಹೆಸರು ಇಟ್ಟುಕೊಂಡು, ಆದಿಕರ್ತನಾದ ದೇವರನ್ನು ಬಿಟ್ಟು, ಕೋಗಿಲೆ ಪ್ರಕೃತಿಯಲ್ಲಿದ್ದು, ಕಾಗೆ ದೇವತೆಗಳನ್ನು ಆರಾಧಿಸುವವರನ್ನು ಚಿಕ್ಕಮ್ಮನ ಗಂಟಿನವರೆಂದು ಹೇಳಬೇಕಾಗಿ ಬಂದಿದೆ.

ಇವರಿಬ್ಬರು ಅಂತಹ ಚಿಕ್ಕಮ್ಮನ ಗಂಟು ಇರುವವರೆ ಆಧ್ಯಾತ್ಮಿಕ ಗುರುಗಳೆಂದು ಹೆಸರಿಟ್ಟುಕೊಂಡು, ಆತ್ಮವನ್ನು ಯಾವ ಮಾತ್ರ ಆರಾಧಿಸದೆ, ತಿಳಿದುಕೊಳ್ಳದೆ, ಒಳಗಿನ ಆತ್ಮಧ್ಯಾಸವನ್ನು ಬಿಟ್ಟು ಹೊರಗಿನ ದೇವತೆಗಳನ್ನು ಆರಾಧಿಸುತ್ತಿದ್ದಾರೆ. ದೇವತೆಗಳ ಆರಾಧನೆಗಳು ಪ್ರಕೃತಿ ಜನಿತ ಕೋರಿಕೆಗಳನ್ನು ಉಂಟುಮಾಡಿದಾಗ, ಆ ಕೋರಿಕೆಗಳ ವಿಧಾನದಿಂದಲೇ ಆದಿಯಲ್ಲಿ ಹುಟ್ಟಿದ ಅಸಲಾದ ದೈವತ್ವಗಳನ್ನು ಕೆಡಿಸಿ, ದೈವಜ್ಞಾನವನ್ನು ಶೈವ, ವೈಷ್ಣವ ಎಂದು ಸೀಳಿಸಿದ್ದಾರೆ. ಶೈವ ಗುರುಗಳು ಭೂಮಿ ಮೇಲೆ ಹುಟ್ಟುವುದಕ್ಕಿಂತ ಮೊದಲಿನಿಂದ ನಾನು ವಿಭೂತಿ ರೇಖೆಗಳು ಧರಿಸುತ್ತಿದ್ದೇನೆ ಅಲ್ಲವೆ! ಇವರ ಲೆಕ್ಕದಲ್ಲಿ ನಾನು ಕೂಡಾ ಶೈವನಾ? ವೈಷ್ಣವವಿಲ್ಲದ ದಿನಗಳಲ್ಲಿಯೇ ನಾಮವನ್ನು ಧರಿಸಿದವರೆಷ್ಟೋ ಇದ್ದಾರೆ ಅಲ್ಲವೆ! ಅವರು ಆಗ ವೈಷ್ಣವರಾ? ಇವರು ದೇವತೆಗಳು, ದೇವತೆಗಳ ಪಾರ್ಟೀಗಳ ಮಾಯೆಯಲ್ಲಿ ಬಿದ್ದು, ಮಾಯೆಗೆ ತಿರುಗಿಬಿದ್ದು "ಯಮಾ" ಎಂದು ಹೆಸರು ಹೊಂದಿದ ನನ್ನನ್ನು ಕೂಡ ಶೈವನೆಂದಿರುವುದಕ್ಕೆ ನೀಲಕಂಠಾ ಚಾರ್ಯನನ್ನು, ವಿಷ್ಣುವನ್ನು ಸಹ ವೈಷ್ಣವನೆಂದಿರುವುದಕ್ಕೆ, ನಾರಾಯಣ ಬಟ್ಟನನ್ನು ಭೂಮಿಮೇಲೆ ಹುಟ್ಟಿಸಿ, 90 ವರ್ಷಗಳು ವೃದ್ಧಾಪ್ಯದಲ್ಲಿ ಅನೇಕ ಕಷ್ಟಗಳು, ಅನೇಕ ಅನಾರೋಗ್ಯಗಳಿಂದ ಬಾಧೆ ಪಡುವಂತೆಯೂ, ಯೌವ್ವನದಲ್ಲಿ ವೈಷ್ಣವ, ಶೈವ ವರ್ಗಗಳ ವೈಷಮ್ಯಗಳೊಂದಿಗೆ ಹೋರಾಡುತ್ತಾ ಅನೇಕ ಸಮಸ್ಯೆಗಳಿಂದ ತಳಮಳಗೊಳ್ಳುತ್ತಾ, ದೈವತ್ವ ಜ್ಞಾನವೊಂದರ ದಡ (ತೀರ) ಸಿಗದೆ ಕಾಲ ಕಳೆಯುವಂತೆ, ಇವರು ಸಂಪಾದಿಸಿಕೊಂಡ ಚಿಕ್ಕಮ್ಮನ ಗಂಟನ್ನು ಅನುಭವಿಸು ವಂತೆ ಶಿಕ್ಷೆ ವಿಧಿಸುತ್ತಿದ್ದೇನೆ.

**ನೀಲಕಂಠಾಚಾರ್ಯರು :–** ಯಮಧರ್ಮರಾಜಾ! ಇದು ಬಹಳ ಅನ್ಯಾಯ. ನಾನು ನನ್ನ ಜೀವನವೆಲ್ಲವೂ ಶಂಕರಭಕ್ತನಾಗಿ, ವೀರ ಶೈವನಾಗಿ ಬದುಕಿದ್ದೇನೆ. ನಾನೇನು ತಪ್ಪು ಮಾಡಲಿಲ್ಲ. ನನ್ನನ್ನು ಕೈಲಾಸಕ್ಕೆ ಕಳುಹಿಸು, ಭೂಲೋಕಕ್ಕೆ ಕಳುಹಿಸಬೇಡ.

**ಯಮ :–** ಬೀಕರವಾಗಿ ನಗುತ್ತಾ! ಎಲ್ಲೈ ಮೂರ್ಖನೆ! ಕೈಲಾಸ ಇರುವುದು

ಭೂಮಿಮೇಲೆ ಅಲ್ಲವೆ? ಯಮಲೋಕ ಇನ್ನು ಮುಂತಾದವುಗಳು ನೀನು ಅಂದುಕೊಳ್ಳುವ ಲೋಕಗಳೆಲ್ಲವೂ ಭೂಮಿಮೇಲೆಯೇ ಇವೆ. ಇನ್ಮುಂದೆ ಶೈವ ಎನ್ನುವ ಮಾತು ಇಲ್ಲದ ಕಾಲದಲ್ಲಿರುವವರಿಗೆ ಶೈವರೆಂದು ಹೆಸರು ಅಂಟಿಸಬೇಡ. ಹಾಗೆ ಮಾಡುವುದರಿಂದ ಭಯಂಕರವಾದ ಪಾಪ ಬರುತ್ತದೆ.

**ನಾರಾಯಣ ಬಟ್ಟು :–** ಯಮಧರ್ಮರಾಜಾ! ನನ್ನನ್ನು ವಿಷ್ಣು ಸನ್ನಿಧಿಗೆ ಕಳುಹಿಸು. ಭೂಲೋಕಕ್ಕೆ ಬೇಡ. ನನ್ನನ್ನು ದಯತೋರು.

**ಯಮಧರ್ಮರಾಜ :–** ನೀನು ಪರಮಮೂರ್ಖನು, ನಾನು ಸಮವರ್ತಿ. ನಿಮ್ಮ ಹಾಗೆ ನನಗೆ ದಯಾಗುಣ ಇರುವುದಿಲ್ಲ. ನನಗೆ ದಯೆ ಇಲ್ಲದಿದ್ದರೂ, ನನ್ನ ಧರ್ಮದ ಪ್ರಕಾರ ನಾನು ನಿನ್ನನ್ನು ಕಳುಹಿಸುವುದು ವಿಷ್ಣು ಸನ್ನಿಧಿಗೇ. ವಿಷ್ಣುಸನ್ನಿಧಿ ಭೂಲೋಕದಲ್ಲಿ ಅಲ್ಲದೆ ಎಲ್ಲಿದೆಯೆಂದುಕೊಂಡಿದ್ದೀಯ? ನೀನಂದುಕೊಳ್ಳುವ ಎಲ್ಲಾ ಲೋಕಗಳು ಭೂಮಿಮೇಲೆಯೇ ಇವೆ. ಇನ್ಮುಂದೆ ಆದರೂ ಭಕ್ತಿಯಿಂದ ರಾಜಕೀಯಪಾರ್ಟಿಯಂತಹ ವೈಷ್ಣವವನ್ನು ಬಿಟ್ಟು ಆತ್ಮಜ್ಞಾನವನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸು. (ಯಮಧರ್ಮರಾಜ ಆತ್ಮಜ್ಞಾನಿ ಕಡೆ ನೋಡಿ) ನನ್ನ ಮುಖದಮೇಲಿರುವ ಮೂರು ವಿಭೂತಿರೇಖೆಗಳಿಗೆ ಅರ್ಥ ತಿಳಿದ ಆತ್ಮಜ್ಞಾನೀ! ನೀನು "ಮಾಯೆ"ಯನ್ನು ಜಯಿಸಿ "ಯಮಾ" ನನ್ನು ಮೆಚ್ಚಿಸಿದ್ದೀಯ. ನಿನಗೆ ಕರ್ಮ ಎನ್ನುವುದು ಇಲ್ಲ. ಕರ್ಮಯೋಗದಿಂದ ನಿನ್ನ ಕರ್ಮ ಎಲ್ಲವೂ ಸುಟ್ಟುಹೋಗಿದೆ. ನಿನಗೆ ಜನ್ಮ ರಾಹಿತ್ಯ ಹೊರತು ಜನ್ಮ ಸಾಹಿತ್ಯ ಇಲ್ಲ. ನಿನ್ನಿಂದ ಭೂಮಿಮೇಲೆ ಜ್ಞಾನ ದೀಪ ಬೆಳಗಿದೆ. ನಿನ್ನ ಜ್ಞಾನವನ್ನು ಅರ್ಥ ಮಾಡಿಕೊಳ್ಳದೆ ನಿನ್ನನ್ನು ದೂಷಿಸಿದವರೆಲ್ಲರೂ ಕ್ಷಮಿಸಲಾರದ ಪಾಪವನ್ನು ಮೂಟೆಕಟ್ಟಿಕೊಂಡಿದ್ದಾರೆ.

**ಆತ್ಮಜ್ಞಾನಿ :–** ಯಮಧರ್ಮರಾಜಾ! ನನ್ನದೊಂದು ಮನವಿ. ಭೂಮಿಮೇಲೆ ಅಜ್ಞಾನ ಸಾಧಾರಣ ಮನುಷ್ಯರಲ್ಲಿ ಇಲ್ಲ. ಸಾಮಾನ್ಯರು, ಜ್ಞಾನ ತಿಳಿಯದ ಅಮಾಯಕರೇ ಹೊರತು, ಅಜ್ಞಾನಿಗಳಲ್ಲ. ಜ್ಞಾನಿಗಳೆಂದುಕೊಂಡು ಸ್ವಲ್ಪವೂ

ಶರೀರದಲ್ಲಿನ ಆತ್ಮಜ್ಞಾನವನ್ನು ತಿಳಿಯದೆ ಬಾಹ್ಯವಾಗಿ ಅನೇಕ ಹೆಸರುಗಳೊಂದಿಗೆ, ಅನೇಕ ಆರಾಧನಗಳೊಂದಿಗೆ, ಅನೇಕ ಸಮಾಜಗಳಾಗಿ, ಅನೇಕ ಸ್ವಾಮಿಗಳಾಗಿ, ಅನೇಕ ಬಾಬಾಗಳಾಗಿ ಇರುವವರೇ ಅಜ್ಞಾನಿಗಳಾಗಿ ಇದ್ದಾರೆ. ಅವರು ಹೇಳುವ ಬೋಧನೆಗಳಲ್ಲಿ ದೇವರಿಗೂ, ಭಗವಂತನಿಗೂ ಅರ್ಥ ತಿಳಿದಿಲ್ಲ. ಶಿವನಿಗೂ, ಶಂಕರನಿಗೂ ವ್ಯತ್ಯಾಸ ತಿಳಿದಿಲ್ಲ. ಯೋಗಕ್ಕೂ, ಯಜ್ಞಕ್ಕೂ ಬೇಧ ತಿಳಿದಿಲ್ಲ. ದೇವರಿಗೂ, ದೇವತೆಗಳಿಗೂ ತಾರತಮ್ಯ ತಿಳಿದಿಲ್ಲ. ಜ್ಞಾನವನ್ನು ತಿಳಿಯ ದವರೆಲ್ಲರೂ ನಾವು ದೊಡ್ಡದಾಗಿ ತಿಳಿದವರೆಂದುಕೊಂಡು, ಪ್ರಜೆಗಳನ್ನು ತಪ್ಪುದಾರಿ ಹಿಡಿಸುವುದರಿಂದ ಇಂತಹ ಉದ್ಯೋಗಸ್ಥರು, ಪೋಲೀಸರು, ವ್ಯಾಪಾರಸ್ಥರು, ರಾಜಕೀಯನಾಯಕರು ಪಾಪಾತ್ಮರಾಗುತ್ತಿದ್ದಾರೆಂದು ನನ್ನ ಅಭಿಪ್ರಾಯ. ಆದ್ದರಿಂದ ಭೂಮಿಮೇಲಿರುವ ಸ್ವಾಮೀಜಿಗಳಲ್ಲಿಯೂ, ಪೀಠಾಧಿಪತಿಗಳಲ್ಲಿಯೂ ಬದಲಾವಣೆ ಬರುವಂತೆ ಮಾಡೆಂದು ನನ್ನ ಮನವಿ.

**ಯಮನು :–** ನಿಜ ಹೇಳಿದೆ. ನಿನ್ನ ಮಾತಿನಿಂದ ನಾನು ಏಕೀಭವಿಸುತ್ತಿದ್ದೇನೆ. ಆದ್ದರಿಂದಲೇ ಯಮಧರ್ಮರಾಜನ ತೀರ್ಪಿನಲ್ಲಿ ಸಾಧಾರಣ ಮನುಷ್ಯರಿಗೆ ಒಂದು ಬಾರಿ ಅನುಭವಿಸಿದರೇ ಮುಗಿದು ಹೋಗುವ ಶಿಕ್ಷೆ ಇರುವಾಗ, ಜ್ಞಾನಿಗಳೆಂದುಕೊಂಡ ಅಜ್ಞಾನಿಗಳು ದೇವರ ವಿಷಯದಲ್ಲಿ ಪಾಪ ಮಾಡುತ್ತಿರುವು ದರಿಂದ, ಅವರಿಗೆ ಎರಡು ಯುಗಗಳು ಅನುಭವಿಸುವ ಶಿಕ್ಷೆ ವಿಧಿಸಲ್ಪಡುತ್ತಿದೆ. ನೀನು ಅವರಲ್ಲಿ ಬದಲಾವಣೆಯನ್ನು ಕೇಳಿದ್ದೀಯ, ಆದ್ದರಿಂದ ಗುರುಗಳಲ್ಲಿಯೂ, ಸ್ವಾಮಿಗಳಲ್ಲಿಯೂ, ಪೀಠಾಧಿಪತಿಗಳಲ್ಲಿಯೂ, ಬಾಬಾಗಳಲ್ಲಿಯೂ ಬದಲಾವಣೆ ತರುವುದಕ್ಕೆ ಈಗಾಗಲೇ **ತ್ರೈತ ಸಿದ್ಧಾಂತ ಆದಿಕರ್ತ ಭೂಮಿಮೇಲೆ ಹುಟ್ಟಿದ್ದಾರೆ.** ಆತನಿಂದಲೇ ನೀನು ಕೋರಿದ ಬದಲಾವಣೆ ನಡೆಯಬಲ್ಲದು.

ಕಿಂಕರರೇ! ನೀವು ಮಹಾಭೂತಗಳಾಗಿ, ಸ್ವಲ್ಪಭೂತಗಳಾಗಿ, ಉಪ ಭೂತಗಳಾಗಿ, ಗ್ರಹಗಳಾಗಿ ಬೇರ್ಪಟ್ಟು ಇವರು ನಾಲ್ವರು ಪಾಪವನ್ನು ಅನುಭವಿಸುವಂತೆ ಮಾಡಿರಿ. ಲಂಚಗಳಿಂದ ಬದುಕಿದ ಈ ಉದ್ಯೋಗಸ್ಥನಿಗೆ ಮರುಜನ್ಮದಲ್ಲಿ ಉದ್ಯೋಗ ಇಲ್ಲದಂತೆ ಕೂಳಿಗು, ಬಟ್ಟೆಗೂ ಬರದಲ್ಲಿ

ಬದುಕುವಂತೆ ಮಾಡಿರಿ. ಪೋಲೀಸ್ ಆಫೀಸರ್‌ಆಗಿ ಗರ್ವದಿಂದ ಬದುಕಿ ಅನೇಕರ ಮೇಲೆ ತಪ್ಪು ಕೇಸುಗಳು ಹಾಕಿದವನನ್ನು, ಬರುವ ಜನ್ಮದಲ್ಲಿ ತಪ್ಪು ಕೇಸಿನಲ್ಲೇ ಜೈಲಿಗೆ ಹೋಗಿ ಜೀವನವೆಲ್ಲಾ ಜೈಲಿನಲ್ಲಿ ಕಳೆಯುವಂತೆ ಮಾಡಿರಿ. ಪೋಲೀಸ್ ಆಗಿ ಇರುವಾಗ ಗುರುವನ್ನು ದೂಷಿಸಿರುವುದಕ್ಕೆ ನೂರು ಜನ್ಮಗಳು ಚರ್ಮರೋಗದಿಂದ ಬಾಧೆಪಡುವಂತೆ ಮಾಡುವೆನು. ಬಡ್ಡೀ ವ್ಯಾಪಾರದಿಂದ ಅನೇಕರನ್ನು ಪೀಡಿಸಿದ ಈತನನ್ನು ಹಾವಿನ ಜನ್ಮಕ್ಕೆ ಕಳುಹಿಸಿ, ಈತನಿಂದ ಬಧೆಪಟ್ಟವರಿಂದ, ಹಾವು ಕಾಣಿಸಿದ ಕೂಡಲೇ ಕಲ್ಲುಗಳಿಂದ ಹೊಡೆಯುವಂತೆ ಮಾಡಿ, ದಿನ ದಿನವೂ ಭಯದಿಂದ ಬದುಕುವಂತೆ ಮಾಡಿರಿ. ಇನ್ನು ರಾಜಕೀಯ ನಾಯಕನಿಗೆ, ಈತನು ಮಾಡಿದ ಹತ್ಯಾಪಾಪಕ್ಕೆ ಚಿಕ್ಕ ವಯಸ್ಸಿನಲ್ಲಿಯೇ ಶತ್ರುಗಳಿಂದ ಕೈಗಳನ್ನು ಕತ್ತರಿಸುವಂತೆ ಮಾಡಿ, ಜೀವನವೆಲ್ಲವೂ ಕೈಗಳಿಲ್ಲದೆ ಬದುಕುವಂತೆ ಮಾಡಿರಿ.

ಮಾಯೆಗೆ ವಿರುದ್ಧವಾದ ಧರ್ಮವನ್ನು ತಿಳಿದ ಯಮಧರ್ಮರಾಜನಾದ ನಾನು ಹೇಳಿದ ಮಾತಿಗೆ ಎದುರಿಲ್ಲ. ಆದ್ದರಿಂದ ನನಗೆ ವಿರುದ್ಧವಾದ "ಮಾಯ" ಕಡೆ ಇರುತ್ತೀರೋ, ಮಾಯೆಗೆ ವಿರುದ್ಧವಾದ "ಯಮಾ" ಕಡೆ ಇರುತ್ತೀರೋ ಯೋಚಿಸಿಕೊಳ್ಳಿರಿ. ಇಲ್ಲಿಗೆ ಈ ಸಭೆಯನ್ನು ಮುಗಿಸುತ್ತಿದ್ದೇವೆ.



# ಮೇಲಿನವನು – ಕೆಳಗಿನವನು

ಸ್ಟೇಜಿನ ಮೇಲೆ ಒಬ್ಬ ಬ್ರಾಹ್ಮಣನು ಬರುತ್ತಿದ್ದರೇ, ಆತನಿಗೆ ಎದುರಾಗಿ ಮಾದಿಗ ಕುಲಸ್ಥನೊಬ್ಬನು ಬರುತ್ತಿದ್ದನು. ಅಷ್ಟರಲ್ಲಿ...

**ಬ್ರಾಹ್ಮಣನು :–** ಎಲ್ಯೆ ಚಂಡಾಲ! ಬ್ರಾಹ್ಮಣನು ದಾರಿಯಲ್ಲಿ ಹೋಗುತ್ತಿದ್ದರೆ ನನ್ನ ಪಕ್ಕದಲ್ಲೇ ನೀನು ಹೋಗುತ್ತೀಯಾ? ಅಂಟಬಾರದವನು, ಮಾಂಸ ತಿನ್ನುವವನು, ನೀಚನು ಸತ್‌ಬ್ರಾಹ್ಮಣನ ಪಕ್ಕದಲ್ಲಿ ಹೋಗಬಾರದೆಂದು ನಿನಗೆ ತಿಳಿದಿಲ್ಲವಾ? ನೀನು ಮಾಡಿದ ಕೆಲಸಕ್ಕೆ ನಾನು ಪುನಃ ಸ್ನಾನ ಮಾಡಿ ಶುದ್ಧಿ ಮಾಡಿಕೊಳ್ಳಬೇಕು.

**ಚಂಡಾಲನು :–** ಏನು ಸ್ವಾಮಿ! ನೀವು ಬರುತ್ತಿದ್ದರೇ ನಿಮ್ಮ ಪಕ್ಕದಲ್ಲಿ ನಾವು ಹೋಗಬಾರದಾ? ಇಲ್ಲಿರುವುದು ಒಂದೇ ದಾರಿ ಅಲ್ಲವೆ! ದಾರಿಯಲ್ಲಿ ಹೋಗುವಾಗ ಯಾರಾದರೂ ಪಕ್ಕದಲ್ಲೇ ಹೋಗುತ್ತಾನೆ. ಅಷ್ಟು ಮಾತ್ರಕ್ಕೆ ಇಷ್ಟು ಮಾತುಗಳನ್ನುತ್ತಾ ನನ್ನನ್ನು ಅಂಟಬಾರದವನೆಂದು, ನೀಚನೆಂದು ಅನ್ನಬಹುದಾ?

**ಬ್ರಾಹ್ಮಣನು :–** ಈಗ ಎದುರಾಗಿ ಬಂದಿದ್ದೀಯ ಅದಕ್ಕೇ ಸ್ನಾನ ಮಾಡಬೇಕು, ಒಂದು ವೇಳೆ ನನ್ನನ್ನು ತಾಕಿದ್ದರೇ ಮೂರು ದಿನಗಳು ಶುದ್ಧಿಕಾರ್ಯ ಮಾಡಿಕೊಳ್ಳಬೇಕಾಗಿ ಬರುತ್ತಿತ್ತು.

**ಚಂಡಾಲನು :–** ನಾನು ನಿನ್ನನ್ನು ತಾಕಲಿಲ್ಲ ಅಲ್ಲವೆ! ಎದುರಾಗಿ ಬಂದಿರುವುದಕ್ಕೆ ನಿನಗೇನು ಅಂಟಿಕೊಂಡಿದೆ?

**ಬ್ರಾಹ್ಮಣನು :–** ಚಂಡಾಲ ದರ್ಶನವೇ ಮಹಾಪಾಪಮ್ ಎಂದು ವೇದಗಳಲ್ಲಿ ಬರೆದಿದೆ. ತಾಕಿದರೆ ಇನ್ನೂ ಪಾಪವೆಂದು ಕೂಡ ಇದೆ. ನೀನು ಮಾದಿಗನು ನಾನು ಬ್ರಾಹ್ಮಣನು ಅದಕ್ಕೇ ಅಷ್ಟೊಂದು ಹೇಳುವುದು.

**ಚಂಡಾಲನು :–** ನೀನು ಬ್ರಾಹ್ಮಣನು, ನಾನು ಮಾದಿಗದವನಾ? ಆದರೇ ಈಗೊಂದು ಮಾತನ್ನು ಕೇಳುತ್ತೇನೆ ಹೇಳುತ್ತೀಯಾ? ನೀನು ಬ್ರಾಹ್ಮಣನೆಂದು, ನಾನು ಕಡಿಮೆಕುಲದವನೆಂದು ಹೇಗೆ ಹೇಳುತ್ತಿದ್ದೀಯ?

**ಬ್ರಾಹ್ಮಣನು :–** ನಾನು ಹುಟ್ಟುವುದೇ ಬ್ರಾಹ್ಮಣಕುಲದಲ್ಲಿ ಹುಟ್ಟಿದ್ದೇನೆ. ಆದ್ದರಿಂದ ಬ್ರಾಹ್ಮಣನು, ನೀನು ಮಾದಿಗ ಕುಲದಲ್ಲಿ ಹುಟ್ಟಿದ್ದೀಯ. ಆದ್ದರಿಂದ ನಮಗೆ ಕಡಿಮೆಯವನೇ. ಇದರಲ್ಲಿ ಏನಾದರೂ ಸಂಶಯವಾ?

**ಚಂಡಾಲನು :–** ಬ್ರಾಹ್ಮಣನೆಂದು, ಕಡಿಮೆಯವನೆಂದು ಹುಟ್ಟುವುದರಿಂದ ಬರುವುದಿಲ್ಲ. ಅವನು ಮಾಡುವ ಕೆಲಸವನ್ನನುಸರಿಸಿ, ಅವನಿಗಿರುವ ಗುಣವನ್ನನುಸರಿಸಿ ಇರುತ್ತದೆಂದು ಭಗವದ್ಗೀತೆಯಲ್ಲಿ ಕೂಡಾ ಹೇಳಿದ್ದಾರೆ. ಬ್ರಹ್ಮಜ್ಞಾನ ಇರುವವನನ್ನು ಬ್ರಾಹ್ಮಣನೆಂದು, ಬ್ರಹ್ಮಜ್ಞಾನವಿಲ್ಲದವನನ್ನು ಅವನಿಗಿಂತ

ಕಡಿಮೆಯವನೆಂದು ಒಬ್ಬ ಗುರುಗಳು ಸಹ ಹೇಳಿದ್ದಾರೆ. ಆತನು ಹೇಳಿದ್ದನ್ನನು ಸರಿಸಿ, ಜಗತಿಯಲ್ಲಿ ಎರಡೇ ಕುಲಗಳಿವೆಯೆಂದು, ದೈವಜ್ಞಾನ ತಿಳಿದವನು ದೊಡ್ಡ ಕುಲದವನೆಂದೂ, ಜ್ಞಾನ ತಿಳಿಯದವನು ಅವನಿಗಿಂತ ಕಡಿಮೆ ಕುಲದವನೆಂದೂ ತಿಳಿಯುತ್ತಿದೆ. ಈಗ ಬ್ರಹ್ಮಜ್ಞಾನವನ್ನು ನಿನಗಿಂತ ನಾನೇ ಹೆಚ್ಚಾಗಿ ತಿಳಿದವನು ಆದ್ದರಿಂದ ನಾನೇ ಬ್ರಾಹ್ಮಣನು, ಕಡಿಮೆ ತಿಳಿದವನು ಆದ್ದರಿಂದ ನೀನೇ ಕಡಿಮೆಯವನು.

**ಬ್ರಾಹ್ಮಣನು :–** ಚತುರ್ವೇದಗಳನ್ನು ಕಂಠಾಪಾಟವಾಗಿ ಹೇಳುವವನು, ನಿತ್ಯವೂ ಗಾಯಿತ್ರೀ ಮಂತ್ರವನ್ನು ಉಚ್ಚರಿಸುವವನು, ಎಷ್ಟೋ ಯಜ್ಞಗಳು ಮಾಡಿದವನಾದ ನನ್ನನ್ನೇ ಜ್ಞಾನ ಇಲ್ಲದವನೆಂದೂ, ನಿನಗಿಂತ ಕೆಳಗಿನವನೆಂದೂ ಅನ್ನುತ್ತೀಯಾ?

**ಚಂಡಾಲನು :–** ನೀನು ನನ್ನನ್ನು ಮಾದಿಗನೆಂದರೇ, ಅಂಟಬಾರದವನೆಂದರೇ, ನಾನು ನಿನಗೆ ವಿವರ ಹೇಳಬೇಕಾಗಿ ಬಂದಿದೆ. ವೇದಗಳನ್ನು ಕಂಠಾಪಾಟವಾಗಿ ಪಾರಾಯಣ ಮಾಡುವುದಾಗಲೀ, ಯಾವ ಮಂತ್ರವನ್ನಾದರೂ ಜಪಿಸುವುದರಿಂದಾಗಲೀ, ಯಜ್ಞಗಳನ್ನು ಮಾಡುವುದಾಗಲೀ ಜ್ಞಾನವಲ್ಲವೆಂದು, ಅದರಿಂದ ದೇವರನ್ನು ತಿಳಿಯುವುದಿಲ್ಲವೆಂದು, ಭಗವದ್ಗೀತೆಯಲ್ಲಿ ಭಗವಂತನೇ ಹೇಳಿದ್ದಾನಲ್ಲವೆ! ಭಗವಂತನು ಗೀತೆಯಲ್ಲಿ ಹೇಳಿದ ಪ್ರಕಾರ ನೀನು ನನಗಿಂತ ಕಡಿಮೆಯವನಲ್ಲವಾ! ನಮ್ಮಂತಹ ಜ್ಞಾನಿಗಳೆಲ್ಲರಿಗೂ ನೀನು ಕೆಳಗಿನವನೇ. ಭಗವದ್ಗೀತೆಯಲ್ಲಿ ದೇವರು ಹೇಳಿದ ಪ್ರಕಾರ ಜ್ಞಾನವನ್ನು ತಿಳಿದು, ಅದರ ಪ್ರಕಾರ ಪ್ರವರ್ತಿಸುವ ನಾನಾಗಲೀ, ನನ್ನಂತಹವರಾಗಲೀ ಎಲ್ಲರೂ ಮೇಲಿನವರೆ. ನಮಗಿಂತ ವಿಭಿನ್ನವಾಗಿ ಯಜ್ಞಗಳು ಮಾಡುವ ನೀವು, ವೇದ ಮಂತ್ರಗಳು ಹೇಳುವ ನೀವು ನಮ್ಮ ಕೆಳಗಿನವರೆ.

**ಬ್ರಾಹ್ಮಣನು :–** ಏನು ಈ ವೈಪರೀತ್ಯ. ನೀನು ದೊಡ್ಡ ಕುಲಸ್ಥನಾ, ನಾನು ಕಡಿಮೆ ಕುಲದವನಾ.

**ಚಂಡಾಲನು :–** ಹೌದು ಮುಮ್ಮಾತಿಗೂ ನಿಜ.

**ಬ್ರಾಹ್ಮಣ :–** (ತಲೆಹಿಡಿದುಕೊಂಡು) ಅಲ್ಲ ಅಲ್ಲ ನಾನೇ ಬ್ರಾಹ್ಮಣನು, ನೀನು ಮಾದಿಗದವನೆ.

**ಚಂಡಾಲನು :–** ಸರಿ ನೀನೇ ಬ್ರಾಹ್ಮಣನು ಎಂದುಕೊಳ್ಳೋಣ. ನಾನು ಎದುರಿಗೆ ಬಂದರೇ ನಿನಗೇನು ಅಂಟಿಕೊಂಡಿದೆ. ನನ್ನದು ಪಂಚಭೂತಗಳಿಂದ ನಿರ್ಮಾಣವಾದ ಶರೀರ ನಿನ್ನದು ಅಷ್ಟೇ, ಶರೀರಗಳಲ್ಲಿ ಯಾವ ವ್ಯತ್ಯಾಸ ಇಲ್ಲ, ಯಾವ ಅಂಟು ಇಲ್ಲ. ಇನ್ನು ಒಳಗಿರುವ ಜೀವಾತ್ಮ ನಿನ್ನ ಶರೀರದಲ್ಲಿ ಒಂದು ಕಡೆ, ನನ್ನ ಶರೀರದಲ್ಲಿ ಮತ್ತೊಂದು ಕಡೆ ಇದೆಯಾ? ಹಾಗೆ ಕೂಡಾ ಇಲ್ಲ. ಎಲ್ಲ ಶರೀರಗಳಲ್ಲಿ ಜೀವಾತ್ಮಗಳು ಗುಣಚಕ್ರದಲ್ಲೇ ಇವೆ. ಆದ್ದರಿಂದ ಅವು ಕೂಡ ಸಮಾನವೇ! ಅವುಗಳಿಗೆ ಅಂಟು ಇಲ್ಲ. ಇನ್ನು ಆತ್ಮ ವಿಷಯಕ್ಕೆ ಬಂದರೇ ಅದು ಎಲ್ಲರಲ್ಲಿ ಬ್ರಹ್ಮನಾಡಿಯಲ್ಲಿಯೇ ಇದೆ. ಅದಕ್ಕೂ ಸಹ ಅಂಟು ಇಲ್ಲ. ಶರೀರ, ಆತ್ಮಗಳು ಎಲ್ಲಾ ಸಮಾನವಾದಾಗ ನೀವು ಯಾವುದನ್ನು 'ಅಂಟು' ಎನ್ನುತ್ತಿದ್ದೀರ. ಅಂಟು ಎಂದರೇ ಅದಕ್ಕೆ ಪರಿಷ್ಕಾರ ಶುದ್ಧಿ ಎಂದರೇ ನಾನು ಒಪ್ಪಿಕೊಳ್ಳುವುದಿಲ್ಲ, ಅಂಟು ಯಾವುದೋ ಎಲ್ಲಿದೆಯೋ ಹೇಳಬೇಕಾದ್ದೇ.

**ಬ್ರಾಹ್ಮಣನು :–** ಅಂಟು ಏನೋ ನನಗೂ ತಿಳಿದಿಲ್ಲ. ನಮ್ಮ ಹಿರಿಯರು ಹೇಳಿದ್ದಾರೆ ಆದ್ದರಿಂದ ನಾನು ಹೇಳಿದ್ದೇನೆ.

**ಚಂಡಾಲನು :–** ನೀವು ಹೊಟ್ಟೆಪಾಡಿಗಾಗಿ ಮಂತ್ರಗಳು ಕಲಿತುಕೊಂಡಿದ್ದೀರ. ಸಂಪಾದನೆಗಾಗಿ ಪಂಚಾಂಗಗಳನ್ನು ಹಿಡಿದುಕೊಂಡಿದ್ದೀರ. ಮದುವೆಗೆ ಅರ್ಥವನ್ನು ಹೇಳದಂತೆ ಮದುವೆಗಳು ಮಾಡುತ್ತಿದ್ದೀರ. ಇದು ಜ್ಞಾನವಾಗುತ್ತದಾ?

**ಬ್ರಾಹ್ಮಣನು :–** ಹುಟ್ಟಿದ ನಂತರ ಯಾವುದೋ ಒಂದು ಕೆಲಸ ಮಾಡಬೇಕಲ್ಲವೆ! ನಮ್ಮಿಂದಲೇ ಹಿಂದೂ ಸಂಸ್ಕೃತಿ ಉಳಿದಿದೆಯಲ್ಲವೆ!

**ಚಂಡಾಲನು :–** ಊ...... ನಿಮಗೆ ಹಿಂದೂಸಂಸ್ಕೃತಿ ಎನ್ನುವ ಪದಕ್ಕೆ ಅರ್ಥ ತಿಳಿದಿದೆಯಾ? ಹಿಂದೂ ಸಾಂಪ್ರದಾಯಗಳನ್ನು ಸರ್ವನಾಶ ಮಾಡಿರುವುದು ನೀವೇ ಅಲ್ಲವೆ! ಈದಿನ ನಿಮ್ಮ ಅಸಮರ್ಥತೆಯಿಂದ ಹಿಂದೂ ಮತದಲ್ಲಿನ

ಎಷ್ಟೋ ಕುಲದವರು ಇತರ ಮತದೊಳಗೆ ಹೋಗಿದ್ದಾರೆ. ಏನೂ ತಿಳಿಯದ ಅಮಾಯಕ ಯುವಕರನ್ನು, ನಾವು ಹಿಂದೂಗಳೆಂದು ಹಿಂದೂಧರ್ಮಗಳನ್ನು ಕಾಪಾಡಿಕೊಳ್ಳಬೇಕೆಂದು, ಪರಮತಗಳನ್ನು ದ್ವೇಷಿಸಬೇಕೆಂದು ಕೆಲವು ಹಿಂದೂ ಸಂಘಗಳ ಹೆಸರಿನಿಂದ ಪ್ರೋತ್ಸಹಿಸಿರುವುದು ನೀವಲ್ಲವೆ! ಈದಿನ ಇರುವ ಹಿಂದೂ ಸಂಘಗಳಿಗೆ ಮತ ತತ್ತ್ವವನ್ನು ಕಲಿಸಿದ್ದಾರೆ ಆದರೆ, ಹಿಂದೂ ಧರ್ಮಗಳು ಇವುಯೆಂದು ತಿಳಿಸಿದ್ದೀರಾ? ನಿಮಗೆ ವಿರುದ್ಧವಾಗಿ ಮಾತನಾಡಿದ ಹಿಂದೂಗಳನ್ನು ಪರಮತಸ್ಥರಾಗಿ ಚಿತ್ರೀಕರಿಸಲಿಲ್ಲವಾ! ಹಿಂದೂ ಧರ್ಮ ಗಳಾವುವೋ ತಿಳಿಯದ ಹಿಂದೂ ಸಂಘಗಳು ಕುರುಡುತನದಿಂದ ಹಿಂದೂಗಳನ್ನೇ ಹಿಂಸಿಸಲಿಲ್ಲವೆ! ಆದಿಶಂಕರಾಚಾರ್ಯರಿಗಿಂತ ಹೆಚ್ಚಾಗಿ ಹಿಂದೂ ಧರ್ಮಗಳಿಗೆ ವಿವರವನ್ನು ಹೇಳುವ ಗುರುವನ್ನು, ವಿವರವಾಗಿ ಭಗವದ್ಗೀತೆಯನ್ನು ಬರೆದ ಗುರುವನ್ನು, ಹಿಂದೂ ಮತದಲ್ಲಿಯೇ ಎಷ್ಟೋ ದೊಡ್ಡ ಜ್ಞಾನಿಗಳಿಂದ ಇದು ನಿಜವಾದ ಜ್ಞಾನವೆಂದು ಪ್ರಶಂಸಿಸಲ್ಪಟ್ಟ ಗುರುವನ್ನು, ನೀವು ತಯಾರು ಮಾಡಿದ ಹಿಂದೂ ಸಂಘಗಳು ಗುರುತಿಸಲಾರದೇ ಹೋಗುವುದಲ್ಲದೆ, ನಾವು ಏನು ಮಾಡುತ್ತಿದ್ದೇವೆನ್ನುವ ಆಲೋಚನೆ ಇಲ್ಲದಂತೆ ಗುರುಗಳು ಬರೆದ ಭಗವದ್ಗೀತೆ ಯನ್ನು ನಡು ರಸ್ತೆಯಲ್ಲಿ ನೀವು ಸುಟ್ಟುಹಾಕಿದ್ದೀರಲ್ಲಯ್ಯ! ಸುಟ್ಟುಹಾಕಿದವರು ಅದರಲ್ಲಿ ಏನಿದೆಯೋ ಎಂದು ನೋಡಿದ್ದೀರ? ನಾವು ಯಾರನ್ನು ಅವಮಾನಿ ಸುತ್ತಿದ್ದೇವೆಂದು ಆಲೋಚಿಸಿದ್ದೀರಾ? ಅಷ್ಟು ಕುರುಡರಾಗಿ ಹಿಂದೂಗಳು ಹಿಂದೂಗಳ ಮೇಲೆಯೇ ದಾಳಿ ಮಾಡುತ್ತಿದ್ದಾರೆಂದರೇ ಇದೆಲ್ಲಾ ನಿಮ್ಮಿಂದಲೇ ಅಲ್ಲವೆ! ಈ ದಿನ ನಮ್ಮ ಸ್ಫೂರ್ತಿಯಿಂದ ಭಗವದ್ಗೀತೆ ಶ್ಲೋಕಗಳನ್ನು ಅನರ್ಗಳವಾಗಿ ಓದುವ ಇತರ ಮತಸ್ಥರನ್ನು ನೋಡುತ್ತಿದ್ದೇವೆ. ನಿಮ್ಮಿಂದಲೇ ಭಗವದ್ಗೀತೆ ಎಂದರೆ ಏನೋ ತಿಳಿಯದ ಹಿಂದೂಗಳನ್ನು ಎಷ್ಟೋ ಜನರನ್ನು ನೋಡುತ್ತಿದ್ದೇವೆ. ಇದೆಲ್ಲವೂ ಯಾರಿಂದ ನಡೆದಿದೆ. ನಿಮ್ಮಿಂದಲೇ! ನೀವು ತಯಾರಿಸಿದ ಹಿಂದೂ ಸಮಾಜದಲ್ಲಿ ದೇವರು ಎಂದರೂ, ಸೃಷ್ಠಿಕರ್ತ ಎಂದರೂ ಅರ್ಥವಾಗದೇ, ಈ ಪದಗಳು ಇತರ ಮತಸ್ಥರವೆಂದು ನಮ್ಮವಲ್ಲವೆಂದು ಹೇಳುತ್ತಿದ್ದಾರೆ. ಆದಿಯಿಂದ ಇರುವ ಸೃಷ್ಠಿಕರ್ತ ಎನ್ನುವ ಹೆಸರನ್ನು, ದೇವರು

ಎನ್ನುವ ಹೆಸರನ್ನು ನಿನ್ನೆ ಮೊನ್ನೆ ಹುಟ್ಟಿದ ಇತರ ಮತದವರಿಗೆ ಲೀಜಿಗೆ ಕೊಟ್ಟಂತೆ ಅವು ನಮ್ಮವಲ್ಲ ಎನ್ನುತ್ತಿದ್ದಾರೆ. ಇಂತಹ ಹಿಂದೂ ಸಮಾಜಕ್ಕೆ ಬುನಾದಿ ಹಾಕಿರುವುದು ನೀವೇ ಅಲ್ಲವೆ! ತಾ ಕೆಟ್ಟ ಕೋತಿ ವನವೆಲ್ಲಾ ಕೆಡಿಸಿದಂತೆ, ನೀವು ಅಜ್ಞಾನಿಗಳಾಗಿ ಹೋಗಿ ಹಿಂದೂ ಸಮಾಜವನ್ನೇ ಅಜ್ಞಾನದ ಕಡೆ ನಡೆಸಿದ್ದೀರ. ಮಹೋನ್ನತವಾದ ಜ್ಞಾನ ಹೊಂದಿದವರಾಗಿ ಪೂರ್ವದ ಹಿಂದೂಗಳಿರುತ್ತಿದ್ದರು. ಈ ದಿನ ತಮ್ಮ ಧರ್ಮವನ್ನು ತಾವೇ ಗುರುತಿಸಲಾರದ ಹಿಂದೂಗಳು ದೈವಭಕ್ತಿಯನ್ನು ಬಿಟ್ಟು ದೇಶಭಕ್ತಿಯನ್ನು ಹೊಂದಿರಬೇಕೆನ್ನುತ್ತಿದ್ದಾರೆ. ಕೊನೆಗೆ ದೇಶಭಕ್ತಿ ಕೂಡಹೋಗಿ ಮತಭಕ್ತಿ ಏರ್ಪಟ್ಟಿದೆ. ಅದರಿಂದ ಅಜ್ಞಾನ ಹಿಂದೂಗಳಾಗಿ ಹೋಗುವುದೇ ಅಲ್ಲದೆ, ನಾವೇ ಮತ ಹಿಂಸೆಗಳನ್ನು ಪ್ರೋತ್ಸಾಹಿಸುತ್ತಿದ್ದೇವೆ. ಇದೆಲ್ಲವೂ ನೋಡಿದರೇ ಹಿಂದೂಸಮಾಜದಲ್ಲಿ ಅಧರ್ಮಗಳು ಪೂರ್ತಿ ವಿಜೃಂಭಿಸಿವೆ. ಅಧರ್ಮಗಳನ್ನು ಅಡಗಿಸುವುದಕ್ಕೆ ಈದಿನ ಇಂದೂ ಧರ್ಮ ಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಗುರುಗಳು ಬಂದರೇ, ನಿಮ್ಮ ಸ್ವಾರ್ಥಬುದ್ಧಿಯಿಂದ ಅದ್ವೈತ ಹಿಂದೂಗಳದ್ದೆಂದು, ತ್ರೈತ ಇತರ ಮತಸ್ಥರದ್ದೆಂದು ನಂಬಿಸಿದ್ದಾರೆ. ಆದಿಶಂಕರಾಚಾರ್ಯರ ಅದ್ವೈತ ಪೂರ್ತಿಯಾಗಿ ತಪ್ಪೆಂದು ಪೂರ್ವದಲ್ಲಿ ನನ್ನಂತಹ ಚಂಡಾಲನು ವಾದಿಸಿ ಗೆದ್ದರೇ, ಆದಿನ ಶಂಕರಾಚಾರ್ಯನೇ ಚಂಡಾಲನ ಕಾಲು ಹಿಡಿದುಕೊಂಡು ನಮಸ್ಕರಿಸಿ ಸೋತುಹೋಗಿದ್ದೇನೆಂದಿದ್ದಾನೆ. ಆ ವಿಷಯ ಹೊರಗೆ ತಿಳಿದರೇ ಚೆನ್ನಾಗಿರುವುದಿಲ್ಲವೆಂದು, ಶಿವನು ಚಂಡಾಲನ ವೇಷದಲ್ಲಿ ಬಂದಿದ್ದರೇ, ಶಂಕರಾಚಾರ್ಯನು ಆತನ ಕಾಲಿಗೆ ನಮಸ್ಕರಿಸಿದ್ದಾನೆಂದು ಮುಚ್ಚಿಟ್ಟುಕೊಂಡಿದ್ದಾರೆ. ಇಂದಿಗಾದರೂ ವೇದಗಳು ನಮ್ಮ ಪ್ರಮಾಣ ಗ್ರಂಥಗಳಲ್ಲ ಭಗವದ್ಗೀತೆ ನಮ್ಮ ಪ್ರಮಾಣ ಗ್ರಂಥವೆಂದು ನಂಬಿ ಜ್ಞಾನವನ್ನು ತಿಳಿದು ಹಿಂದೂತ್ವ ಧರ್ಮಗಳಾವುವೋ ಪ್ರಜೆಗಳನ್ನು ತಿಳಿದುಕೊಳ್ಳಲು ಬಿಡಿ.

ಇಷ್ಟು ಹೇಳಿದರೂ ಅಸೂಯೆಯಿಂದ ಅರ್ಥ ಮಾಡಿಕೊಳ್ಳಲಾರದೇ ಹೋದರೇ ನೀನು ಎಂದಿಗೂ ಮಾದಿಗನೇ. ಹೇಳಿದ್ದನ್ನು ಅರ್ಥ ಮಾಡಿಕೊಂಡು ಆಚರಿಸಿದರೇ ನಿಜವಾದ ಬ್ರಾಹ್ಮಣನಾಗುತ್ತೀಯ. ನಮಸ್ತೇ.

# ಯಾರು ದೇವರು

ಎಲ್ಲಯ್ಯ, ಗಿರಿ ಎನ್ನುವ ಇಬ್ಬರು ಭಕ್ತರು ಸ್ಟೇಜಿನ ಮೇಲೆ ದೇವರನ್ನು ಕುರಿತು ವಾದೋಪವಾದಗಳು ಮಾಡುತ್ತಿರುವರು. ಎಲ್ಲಯ್ಯ, "ಆದಿಪರಾಶಕ್ತಿಯೇ ದೇವತೆಗಳೆಲ್ಲರಿಗೂ ದೊಡ್ಡದೆಂದೂ, ಆಕೆಯಿಂದಲೇ ತ್ರಿಮೂರ್ತಿಗಳಾದ ವಿಷ್ಣು, ಈಶ್ವರ, ಬ್ರಹ್ಮರು ಹುಟ್ಟಿದ್ದಾರೆಂದೂ, ದೇವತೆಗಳೆಲ್ಲರಿಗೂ ದೊಡ್ಡವಳು ಆದಿಪರಾ ಶಕ್ತಿಯೇ" ಎಂದು ವಾದಿಸುತ್ತಿರುವನು. ಗಿರಿ "ದೇವರು ಪುರುಷನಾಗಿಯೇ ಇರುತ್ತಾನೆ, ಸ್ತ್ರೀ ಪ್ರಕೃತಿ ಸ್ವರೂಪಿಣಿ. ಆದ್ದರಿಂದ ಪರಾಶಕ್ತಿ ಎಲ್ಲರಿಗೂ ತಾಯಿಯಂತವಳು ಆಕೆಗೆ ಪತಿಯಾದ ದೇವರು ಪ್ರತ್ಯೇಕವಾಗಿ ಇದ್ದಾನೆ" ಎಂದು ಹೇಳಿದ್ದಾನೆ.

**ಎಲ್ಲಯ್ಯ :–** ದೇವತೆಗಳೆಲ್ಲರಿಗೂ ಹಿರಿಯನಾದ ವಿಷ್ಣುವಿಗೇ ಆಕೆ ತಾಯಿ ಆದಾಗ ವಿಷ್ಣುವಿಗಿಂತ ಯಾವ ದೇವರು ದೊಡ್ಡವನಿಲ್ಲದಿರುವಾಗ ಆದಿ ಪರಾಶಕ್ತಿಯೇ ಅಲ್ಲವೆ ಎಲ್ಲರಿಗೂ ದೊಡ್ಡವಳು.

**ಗಿರಿ :–** ಆದಿಪರಾಶಕ್ತಿಯಾದ ಆಕೆಗು ಕೂಡ ಪತಿ ಇದ್ದಾನೆ. ಆತನೇ ಅಸಲಾದ ದೇವರು. ಆತನನ್ನೇ ಕೆಲವರು ಸೃಷ್ಠಿಕರ್ತಯೆಂದು, ಕೆಲವರು ಪರಮಾತ್ಮಯೆಂದೂ, ಕೆಲವರು ದೇವರೆಂದು ಕರೆಯುತ್ತಿದ್ದಾರೆ.

**ಎಲ್ಲಯ್ಯ :–** ನಾರಾಯಣ ಮೂರ್ತಿಯಾದ ವಿಷ್ಣುವನ್ನೇ ದೇವರೆಂದು ಎಲ್ಲರೂ ಅನ್ನುತ್ತಿದ್ದಾರಲ್ಲವೆ! ಆತನನ್ನು ಹುಟ್ಟಿಸಿದ ಆದಿಪರಾಶಕ್ತಿಯೇ ಅಲ್ಲವೆ ದೊಡ್ಡದು.

**ಗಿರಿ :–** ಪರಾಶಕ್ತಿಗೆ ಹುಟ್ಟಿದವನು ಸೃಷ್ಠಿಸಲ್ಪಟ್ಟಿರುವವನೇ ಆದರೇ ಸೃಷ್ಠಿಕರ್ತನಲ್ಲ ಅಲ್ಲವೆ! ಹಾಗಿರುವಾಗ ವಿಷ್ಣುವನ್ನು ದೇವರೆಂದು ಸೃಷ್ಠಿಕರ್ತಯೆಂದು ಹೇಗೆ ಕರೆಯಬೇಕು?

**ಎಲ್ಲಯ್ಯ :–** ಆದರೇ ನಿನ್ನ ದೇವರು ಯಾರೋ ಹೇಳು? ಎಲ್ಲಿರುತ್ತಾನೋ ಹೇಳು? ಏನು ಮಾಡುತ್ತಿರುತ್ತಾನೋ ಹೇಳು?

**ಗಿರಿ :–** ಯಾರೆಂದು ಹೇಳಲಿ? ಆತನಿಗೆ ಹೆಸರೇ ಇಲ್ಲ, ಆಕಾರ ಅಷ್ಟಕ್ಕೂ ಇಲ್ಲ, ಎಲ್ಲಿರುತ್ತಾನೆಂದು ಹೇಳಲಿ? ಆತನು ಎಲ್ಲಾ ಕಡೆ ವ್ಯಾಪಿಸಿ, ಎಲ್ಲಾ ಕಡೆ ಇರುವವನು. ಆತನು ಏನೂ ಮಾಡುವುದಿಲ್ಲ. ತನ್ನ ಸಂಕಲ್ಪದಿಂದಲೇ ಪ್ರಕೃತಿಯೇ ಎಲ್ಲಾ ಮಾಡಿ ಇಡುತ್ತಿದೆ. ನಿಜಕ್ಕೆ ಆತನ್ಯಾರೋ ಭೂಮಿಮೇಲೆ ಯಾರಿಗೂ ತಿಳಿದಿಲ್ಲ.

**ಎಲ್ಲಯ್ಯ :–** ಆತನ್ಯಾರೋ ಯಾರಿಗೂ ತಿಳಿಯದಿರುವಾಗ ಆತನೊಂದಿಗೆ ನಮಗೇನು ಕೆಲಸ?

**ಗಿರಿ :–** ನಾವು ಜೀವಿಗಳು ಆದ್ದರಿಂದ, ಶರೀರವೆನ್ನುವ ಜೈಲಿನಲ್ಲಿ ಸಿಲುಕಿದವರು ಆದ್ದರಿಂದ, ಆತನ ಶಕ್ತಿಯನ್ನು ನಾವು ಹೊಂದದೇ, ಯಾರೂ ದೇಹ ಖೈದಿಯಿಂದ ಹೊರಬೀಳುವುದಿಲ್ಲ ಆದ್ದರಿಂದ, ಆತನೇ ದೇವರು ಆದ್ದರಿಂದ, ಆತನನ್ನು ತಿಳಿದುಕೊಳ್ಳುವುದೇ ಪ್ರತಿ ಮನುಷ್ಯನಿಗೂ ಮುಖ್ಯವಾದ ಕೆಲಸ.

**ಎಲ್ಲಯ್ಯ :–** ಅಂತಹ ದೇವರು ಒಬ್ಬನಿದ್ದಾನೆಂದು ಪೂರ್ವದಲ್ಲಿ ಯಾರಿಗಾದರೂ ತಿಳಿದಿದೆಯಾ? ಪೂರ್ವದಲ್ಲಿ ಆತನನ್ನು ಯಾರಾದರೂ ಪೂಜಿಸಿದ್ದಾರಾ?

**ಗಿರಿ :–** ಪೂರ್ವದಲ್ಲಿ ಪರಮಾತ್ಮನನ್ನು ಕುರಿತು ಬಹಳ ಜನರಿಗೆ ತಿಳಿದಿದೆ. ಆದ್ದರಿಂದ ತ್ರೇತಾ ಯುಗದಲ್ಲಿಯೇ ಶ್ರೀರಾಮನು, ರಾವಣನು, ಮಾನವಾಕಾರ ವಿಲ್ಲದ ಗುಂಡನ್ನು ದೇವರ ಗುರುತಾಗಿ ಮಾಡಿ ಪೂಜಿಸಿದ್ದಾರೆ. ಅದಕ್ಕೂ ಮೊದಲು ಸೃಷ್ಠಿ ಆದಿಯಲ್ಲಿಯೇ ವಿಷ್ಣು, ಈಶ್ವರ, ಬ್ರಹ್ಮರಾದ ತ್ರಿಮೂರ್ತಿಗಳು, ಅವರಿಗೇ ತಿಳಿಯದ ದೇವರಿಗೋಸ್ಕರ ಎಷ್ಟೋ ತೀವ್ರವಾಗಿ ಯೋಚಿಸಿದ್ದಾರೆ.

**ಎಲ್ಲಯ್ಯ :–** ಏನೂ ತ್ರಿಮೂರ್ತಿಗಳು ಕೂಡ ಧ್ಯಾನಿಸಿದ್ದಾರಾ?

**ಗಿರಿ :–** ಹೌದು ತ್ರಿಮೂರ್ತಿಗಳನ್ನು ಕೂಡ ಹುಟ್ಟಿಸಿದವನೇ ಸೃಷ್ಠಿಕರ್ತನಾದ ದೇವರು. ಆ ದೇವರನ್ನು ಕುರಿತೇ **ಪರಮ, ಪವಿತ್ರ, ಪರಿಶುದ್ಧ ಗ್ರಂಥವಾದ ಭಗವದ್ಗೀತೆ** ಕೂಡಾ ಹೇಳಿದೆ.

**ಎಲ್ಲಯ್ಯ :–** ನಾನು ನಿನ್ನ ಮಾತನ್ನು ನಂಬುವುದಿಲ್ಲ. ಇಷ್ಟು ಕಾಲ ನಾನು ಪೂಜಿಸಿದ ಪರಾಶಕ್ತಿಯನ್ನೇ ಈ ವಿಷಯ ಕೇಳುತ್ತೇನೆ.

**ಗಿರಿ :–** ಸರಿ ಕೇಳಿ ನೋಡು.

**ಎಲ್ಲಯ್ಯ :–** ಅಮ್ಮಾ! ಪರಾಶಕ್ತೀ! ದೇವರು ಯಾರು ಎನ್ನುವ ಸಂಶಯವನ್ನು ನೀನೇ ಬಗೆಹರಿಸಬೇಕು. ಈ ವಿಷಯ ನನಗೇ ಅಲ್ಲ ಸಮಸ್ತ ಮಾನವರಿಗೂ ತಿಳಿಯಬೇಕು. ನೀನು ನಮ್ಮನ್ನು ಕರುಣಿಸಿ, ನಮಗೆ ಕಾಣಿಸಿ ಈ ವಿಷಯವನ್ನು ಹೇಳು ತಾಯಿ.

***(ಅಷ್ಟರಲ್ಲಿ ಪರಾಶಕ್ತಿ ಸ್ಟೇಜಿನ ಮೇಲೆ ಕಾಣಿಸುತ್ತಾಳೆ)***

**ಪರಾಶಕ್ತಿ :–** ನಾನು ದೇವರು ಯಾವ ಕಾರಣಕ್ಕು ಅಲ್ಲ. ಒಬ್ಬ ದೇವತೆ ಮಾತ್ರವೇ. ದೇವರ್ಯಾರೋ ತಿಳಿಯಬೇಕೆಂದರೇ ಭಗವದ್ಗೀತೆಯಲ್ಲಿ ನಾನೇ ದೇವರು ಎಂದ ಶ್ರೀಕೃಷ್ಣನನ್ನೇ ಕೇಳಿರಿ.

**ಗಿರಿ :–** ಗೀತೆಯನ್ನು ಬೋಧಿಸಿದ ಕೃಷ್ಣಾ! ಈ ವಿಷಯವನ್ನು ನೀನೇ ಹೇಳಬೇಕು. ನಮ್ಮ ಮಾತನ್ನು ಆಲಿಸಿ ನಮ್ಮ ಸಂಶಯವನ್ನು ತೀರಿಸು.

***(ಅಷ್ಟರಲ್ಲಿ ಸ್ಟೇಜಿನ ಮೇಲೆ ಕೃಷ್ಣನು ಪ್ರತ್ಯಕ್ಷವಾಗಿದ್ದಾನೆ)***

**ಕೃಷ್ಣನು :–** ಕಾಣಿಸುವವನು ಎಂದಿಗೂ ದೇವರಲ್ಲ. ಆದ್ದರಿಂದ ಕಾಣಿಸುವ ಕೃಷ್ಣನು ದೇವರಲ್ಲ, ದೇವರು ಯಾರೋ ತಿಳಿಯಬೇಕೆಂದರೇ ನಾರದನನ್ನು ಕೇಳಿ.

***(ಅಷ್ಟರಲ್ಲಿ ಅಲ್ಲಿಗೆ ನಾರದನು ಕೂಡಾ ಬರುತ್ತಾನೆ)***

**ನಾರದ :–** ದೇವರು ಯಾರು? ಎನ್ನುವುದು ಎಲ್ಲದಕ್ಕಿಂತ ದೊಡ್ಡ ಪ್ರಶ್ನೆ. ಇದು ಸಮಸ್ತ ಮಾನವರಿಗೂ ತಿಳಿಯದ ಪ್ರಶ್ನೆ. ಎಷ್ಟೋ ಜನ ಎಷ್ಟೋ ಮತಗಳನ್ನು ಸೃಷ್ಟಿಸಿಕೊಂಡು ದೇವರು ಇಂತಹವನು ಎನ್ನುತ್ತಿದ್ದಾರೆ. ನಮ್ಮ ವಾದನೆಯೇ

ನಿಜವೆಂದು ಎಲ್ಲ ಮತದವರು ಅನ್ನುತ್ತಿದ್ದಾರೆ. ವಾಸ್ತವಕ್ಕೆ ಯಾರ ಮಾತುಗಳೂ ಸತ್ಯವಲ್ಲ. ದೇವರ್‍ಯಾರು ಎನ್ನುವ ಸತ್ಯವನ್ನು ನನ್ನ ಬಾಯಿಂದ, ನನ್ನ ಮಾತಾಗಿ ದೇವರೇ ಹೇಳಿಸುವುದು ನನ್ನ ಭಾಗ್ಯವೆಂದು ತಿಳಿಯುತ್ತಿದ್ದೇನೆ. ದೇವರು ಯಾರೆನ್ನುವ ವಿವರ ಭಗವದ್ಗೀತೆಯಲ್ಲಿ ಈ ಶ್ರೀಕೃಷ್ಣರವರೇ ಹೇಳುತ್ತಾ ಬಂದಿದ್ದಾರೆ. ನನ್ನನ್ನೇ ನಮಸ್ಕರಿಸು, ನನ್ನನ್ನೇ ಆರಾಧಿಸು, ನಾನೇ ಸೃಷ್ಠಿಕರ್ತ, ಪರಮಾತ್ಮನು ಎಂದ ಕೃಷ್ಣನು ಕೂಡ ಈಗ ನಾನು ದೇವರು ಅಲ್ಲ ಎನ್ನುತ್ತಿದ್ದಾನೆ. ಸಾವು ಹುಟ್ಟುಗಳೇ ಇಲ್ಲದ ದೇವರು ಯಾರೆನ್ನುವುದು ಯಾರಿಗೂ ತಿಳಿದಿಲ್ಲ. ದೇವರ ವಿಷಯ ತಿಳಿದವನು ದೇವರೊಬ್ಬನೇ. ಆ ವಿಷಯ ಮಾನವರಿಗೆ ತಿಳಿಯಬೇಕೆಂದರೆ ಆತನೇ ಹೇಳಬೇಕು. ಆ ಸೂತ್ರದ ಪ್ರಕಾರ ಎಲ್ಲಿ ದೇವರ ಧರ್ಮಗಳು ತಿಳಿಯುತ್ತಿವೆಯೋ, ಅಲ್ಲಿ ದೇವರೇ ಹೇಳುತ್ತಿದ್ದಾನೆಂದು ತಿಳಿಯಬೇಕು. ಅದರ ಪ್ರಕಾರ ಗೀತೆಯಲ್ಲಿ ಸಂಪೂರ್ಣ ಜ್ಞಾನವನ್ನು ತಿಳಿಸಿ, ನಾನು ಹೊರತು ಬೇರೆ ದೇವರೇ ಇಲ್ಲ ಎಂದ ಕೃಷ್ಣನನ್ನು ದೇವರನ್ನಬೇಕು. ಆದರೆ ದೇವರು ಇಂದ್ರಿಯ ಅಗೋಚರನು ಎನ್ನುವ ಸೂತ್ರದ ಪ್ರಕಾರವಾದರೇ ಕಣ್ಣಿಗೆ ಕಾಣಿಸುವ ಕೃಷ್ಣನು ಕೂಡ ದೇವರು ಅಲ್ಲ. ಆದ್ದರಿಂದ ಕೃಷ್ಣನು ಕೂಡ ನಾನು ದೇವರು ಅಲ್ಲ ಎನ್ನುತ್ತಿದ್ದಾನೆ. ಈ ಮಾತು ವಾಸ್ತವವೇ. ಪರಸ್ಪರ ವಿರುದ್ಧವಾಕ್ಯಗಳನ್ನು ದೇವರು ಹೇಳುವನಾ ಎಂದು ಕೆಲವರು ಪ್ರಶ್ನಿಸಬಹುದು. ದೇವರು ಎಂದಿಗೂ ಹಾಗೆ ಹೇಳುವುದಿಲ್ಲ. ವಾಸ್ತವವೇನೆಂದರೇ ಕಾಣಿಸುವ ಕೃಷ್ಣನ ಶರೀರದೊಳಗಿನಿಂದ, ಕಾಣಿಸದೆ ಮಾತನಾಡುವವನೇ ದೇವರು. ಗೀತೆಯಲ್ಲಿ ನಿನ್ನ ಮುಂದೆ, ನಿನ್ನ ಹಿಂದೆ, ನಿನ್ನಲ್ಲಿಯೂ ಇದ್ದೇನೆಂದು ಅರ್ಜುನನೊಂದಿಗೆ ಹೇಳಿದಾಗ ಅರ್ಜುನನಿಗೆ ಅನುಮಾನ ಬಂದು, ಮಾತನಾಡುವವನು ಕೃಷ್ಣನು ಅಲ್ಲವೆಂದು ತಿಳಿದು, ನೀನ್ಯಾರೆಂದು ಪ್ರಶ್ನಿಸಿದಾಗ, ನಾನು ನಿನ್ನ ಕಣ್ಣಿಗೆ ಕಾಣಿಸುವವನು ಅಲ್ಲವೆಂದು ಸ್ವತಃವಾಗಿ ದೇವರೇ ಕೃಷ್ಣನ ರೂಪದಿಂದ ಹೇಳಿದ್ದಾನೆ. ಆ ದಿನ ದೇವರ ರೂಪ ಅರ್ಜುನನಿಗೆ ಮಾತ್ರವೇ ತಿಳಿದಿದೆ. ಎಂದಿಗಾದರೂ ಅದುವೇ ಭವಿಷ್ಯತ್ ಕಾಲಕ್ಕೆ ನಿದರ್ಶನ. ಇದನ್ನನುಸರಿಸಿ ಕೃಷ್ಣನ ರೂಪವೇ ದೇವರಾದರೇ ಪ್ರತ್ಯೇಕವಾಗಿ ಕಾಣಿಸುವ ಅವಶ್ಯವಿಲ್ಲ. ಆದ್ದರಿಂದ ಈದಿನ ಕೃಷ್ಣನು, ನಾನು ದೇವರು ಅಲ್ಲ

ಎನ್ನುವ ಮಾತು ವಾಸ್ತವ. ಅಮ್ಮ ಪರಾಶಕ್ತಿ ನಾನು ದೇವರು ಅಲ್ಲ ಎನ್ನುವಮಾತು ಸಹ ವಾಸ್ತವವೇ.

ಕೆಲವರು ಮನುಷ್ಯರು ದೇವರನ್ನು ಕೃಪಾಮಯನು, ಪ್ರೇಮಮಯನು ಎನ್ನುತ್ತಿದ್ದಾರೆ. ಆ ಮಾತು ವಾಸ್ತವವಾ ಎಂದು ಪರಿಶೀಲಿಸಿದರೇ, 'ಕೃಪೆ' ಎಂದರೆ 'ದಯೆ' ಎಂದು ಅರ್ಥ. ದಯೆಯಾಗಲಿ, ಪ್ರೇಮವಾಗಲಿ ಇವು ಮಾನವನ ತಲೆಯಲ್ಲಿನ ಹನ್ನೆರಡು ಗುಣಗಳಲ್ಲಿ ಬೇರೆಬೇರೆ ಎರಡು ಗುಣಗಳು. ದೇವರು ಗುಣಾತೀತನು ಎನ್ನುವ ಸೂತ್ರದ ಪ್ರಕಾರ, ದೇವರು ಯಾವೊಂದು ಗುಣ ಇರುವವನಲ್ಲ. ಗುಣ ಇದ್ದರೆ ಅದರಿಂದ ಕಾರ್ಯ, ಕಾರ್ಯದಿಂದ ಕರ್ಮ, ಕರ್ಮದಿಂದ ಜನ್ಮ ತಪ್ಪದೆ ಬರುತ್ತದೆ. ದೇವರು ಗುಣಗಳಿಗು, ಕಾರ್ಯ ಗಳಿಗು, ಕರ್ಮಗಳಿಗು ಅತೀತನು ಆದ್ದರಿಂದ ಪ್ರೇಮಮಯನು, ಕೃಪಾಮಯನು ಎನ್ನುವ ವಾಕ್ಯ ಕೂಡ ಆತನಿಗೆ ಸರಿಹೋಗುವುದಿಲ್ಲ.

ಇನ್ನು ಕೆಲವರು ದೇವರು ಪರಲೋಕದಲ್ಲಿ ಇದ್ದಾನೆಂದಿದ್ದಾರೆ. ಆ ಮಾತನ್ನು ವಿವರಿಸುತ್ತಾ, ಪರಲೋಕ ಮೇಲೆ ಆಕಾಶದಲ್ಲಿ ಇದೆಯೆಂದು, ಅಲ್ಲಿಂದ ದೇವರು ತನ್ನ ದೂತರನ್ನು ಕಳುಹಿಸಿ ದೇವರ ವಿಷಯವನ್ನು ಅವರಿಂದ ಹೇಳಿಸುವನೆಂದು ಅನ್ನುತ್ತಿದ್ದಾರೆ. ಪರಲೋಕ ಎಲ್ಲಿದೆ? ಎಷ್ಟು ದೂರದಲ್ಲಿ ಇದೆ ಅವರಿಗೇ ತಿಳಿದಿಲ್ಲ! ಎಲ್ಲೋ ಇದ್ದಾನೆಂದರೇ ಇಲ್ಲಿ ಇಲ್ಲವೆಂದೇ ಅಲ್ಲವೆ ಅರ್ಥ? ಇಲ್ಲಿ ಇಲ್ಲದವನನ್ನು, ಅಲ್ಲಿ ಮಾತ್ರ ಇರುವವನನ್ನು ಸ್ವಲ್ಪ ಪ್ರದೇಶಕ್ಕೇ ಪರಿಮಿತಿ ಮಾಡಬಹುದು. ಈ ಮಾತಿನ ಪ್ರಕಾರ ದೇವರು ಪರಿಮಿತನಾಗುತ್ತಾನೆ. ದೇವರು ಅಪ್ರಮೇಯನು, ಅಪರಿಮಿತನು, ಎಲ್ಲೆಗಳಿಲ್ಲದವನು, ಯಾವ ಅಳತೆಗೂ ಸಿಗದವನೆಂದು, ಗೀತೆಯಲ್ಲಿ ದೇವರು ಹೇಳಿದ ಸೂತ್ರಗಳ ಪ್ರಕಾರ ಎಲ್ಲೋ ಇರುವವನು, ಇಲ್ಲಿ ಇಲ್ಲದವನು ದೇವರು ಅಲ್ಲ.

ಇನ್ನೂ ಕೆಲವರು ದೇವರು ಪರಲೋಕ ರಾಜ್ಯದಲ್ಲಿಂದ ತನ್ನ ಇಷ್ಟ ಕುಮಾರರನ್ನು ಭೂಮಿಮೇಲೆಗೆ ಪ್ರವಕ್ತರ ಹಾಗೆ ಕಳುಹಿಸುತ್ತಾ, ತನ್ನ ವಿಷಯ ಪ್ರಜೆಗಳಿಗೆ ಹೇಳುವಂತೆ ಮಾಡುತ್ತಿದ್ದಾನೆಂದು ಅನ್ನುತ್ತಿದ್ದಾರೆ. ಆತನ ಗೃಹದಲ್ಲಿ

ಕೆಲಸದಾಳುಗಳು ಕೂಡ ಇದ್ದಾರೆಂದು ಅನ್ನುತ್ತಿದ್ದಾರೆ. ದೇವರು ಸರ್ವವ್ಯಾಪಿ ಎನ್ನುವ ಸೂತ್ರದ ಪ್ರಕಾರ, ಮತ್ತು ಸರ್ವಜೀವರಾಶಿಗಳಿಗು ನಾನೇ ತಂದೆ ಎನ್ನುವ ಸೂತ್ರದ ಪ್ರಕಾರ ಆತನಿಗೆ ಪ್ರಾಣಿಗಳು, ಪಕ್ಷಿಗಳು, ಮನುಷ್ಯರು ಎಲ್ಲರೂ ಸಂತತಿಯೇ ಹೊರತು ಇಂತಹವರೇ ಕುಮಾರರೆನ್ನುವ ಮಾತು ಅನ್ವಯಿಸುವುದಿಲ್ಲ. ಪರಲೋಕ ಈ ಲೋಕದಲ್ಲೇ ಕಾಣಿಸದಿರುವುದೆಂದು ತಿಳಿಯದೆ ಎಲ್ಲೋ ಇದೆಯೆಂದುಕೊಳ್ಳುವುದು ತಪ್ಪು. ಆದ್ದರಿಂದ ಸರ್ವವ್ಯಾಪಿ, ಸರ್ವ ಪಿತ ಎನ್ನುವ ಸೂತ್ರದ ಪ್ರಕಾರ ಅವರ ಅಂದಾಜಿನ ಪ್ರಕಾರ ಅಂದುಕೊಂಡವನು ದೇವರು ಅಲ್ಲ.

ಇನ್ನೂ ಕೆಲವರು ಕಣ್ಣಿಗೆ ಕಾಣಿಸುವ ಕಲ್ಲನ್ನು, ರಾಜ್ಯವನ್ನಾಳಿದ ರಾಜನನ್ನು ದೇವರೆನ್ನುತ್ತಿದ್ದಾರೆ. ಕಾಣಿಸುವ ಹಸುವಿನಲ್ಲಿ ದೇವರಿದ್ದಾನೆಂದು ಕೆಲವರು ಹಸುವಿಗೆ ಕೈಮುಗಿಯುತ್ತಿದ್ದಾರೆ. ಹಾಗೆಯೇ ಹೆಸರು ಗಳಿಸಿದ ಮನುಷ್ಯನಲ್ಲಿ ದೇವರಿದ್ದಾನೆಂದು ಕೆಲವರು ಕೈಮುಗಿಯುತ್ತಿದ್ದಾರೆ. ಇತರರನ್ನು ಮುಗಿಯುವವರು ಇತರರೊಳಗೆ, ನನ್ನನ್ನು ಮುಗಿಯುವವನು ನನ್ನೊಳಗೆ, ಸೇರುತ್ತಾನೆನ್ನುವ ಸೂತ್ರದ ಪ್ರಕಾರ ನಾವು ಕೈ ಮುಗಿಯುವವರೆಲ್ಲರೂ ದೇವರು ಅಲ್ಲವೆಂದು ತಿಳಿಯುತ್ತಿದೆ.

ಇಷ್ಟು ಹೇಳಿದರೂ ದೇವರು ಯಾರೋ ಹೇಳದೆ "ಇವರು ಅಂದುಕೊಂಡಂತೆ ಅಲ್ಲ, ಅವರು ಅಂದುಕೊಂಡಂತೆ ಅಲ್ಲ ಎನ್ನುತ್ತಿದ್ದಾರೆ. ನಿಮಗೆ ತಿಳಿದಿರುವ ಪ್ರಕಾರ ದೇವರು ಯಾರೋ ತೀರ್ಮಾನಿಸಿ ಹೇಳಲಿಲ್ಲವೇ" ಎಂದು ನೀವೆಂದುಕೊಳ್ಳಬಹುದು. ಅದಕ್ಕೆ ನಮ್ಮ ಸಮಾಧಾನವೇನೆಂದರೇ! ನಾನು ಹೇಳಿದರೇ ದೇವರ ಜ್ಞಾನ ಅರ್ಥವಾಗುತ್ತದೆ, ಆದರೆ ದೇವರು ಅರ್ಥವಾಗುವುದಿಲ್ಲ. ದೇವರು ಅನಿರ್ವಚನೀಯನು, ಮಾತುಗಳಿಗೆ ಸಿಗದವನು. ಆದ್ದರಿಂದ ದೇವರ ಜ್ಞಾನವನ್ನೇ ಯಾರಾದರೂ ಹೇಳಬಹುದು. ದೇವರು ಇಂತಹವನೆಂದು ಹೇಳಲಾರನು. ಜ್ಞಾನದ ಪ್ರಕಾರ ಹೇಳಬೇಕೆಂದರೇ, ಇಲ್ಲಿ ಕಾಣಿಸದೆ, ಸರ್ವಕ್ಕೂ ಸೂತ್ರಧಾರಿಯಾಗಿ, ಜನ್ಮಕರ್ಮಕ್ಕೆ ಅತೀತನಾಗಿ, ಮಾಯೆ

ಜನ್ಮ ತಾಳಿ, ಮಾಯೆ ಶರೀರದಲ್ಲಿರುವ ಈ ಕೃಷ್ಣನನ್ನೇ ದೇವರೆಂದು ಹೇಳಬಹುದು. ಇಲ್ಲಿಯವರೆಗು ಕೃಷ್ಣನು ಸಹ ದೇವರಲ್ಲ ಎಂದ ನೀವೇ, ಅದೇ ಬಾಯಿಂದ ಕೃಷ್ಣನನ್ನು ದೇವರೆನ್ನುತ್ತಿದ್ದೀರೇನು ಎಂದು ಬಹಳ ಜನರಿಗೆ ಪ್ರಶ್ನೆ ಬಂದಿರಬಹುದು. ಅದಕ್ಕೆ ನನ್ನ ಉತ್ತರ ಏನೆಂದರೆ! ನೀವು ಕಣ್ಣಿಗೆ ಕಾಣಿಸುವುದನ್ನೇ ನೋಡುತ್ತಿದ್ದೀರ. ಆದ್ದರಿಂದ ನಿಮಗೆ ಈತನು ದೇವರು ಅಲ್ಲವೇ ಅಲ್ಲ. ನಾನು ಕಣ್ಣಿಗೆ ಕಾಣಿಸದಿರುವು ದನ್ನು, ನನಗಿರುವ ನೇತ್ರಗಳೊಂದಿಗೆ ಅಲ್ಲದೆ, ಅನೇತ್ರದಿಂದ ನೋಡುತ್ತಿದ್ದೇನೆ, ಆದ್ದರಿಂದ ನನಗೆ ಈತನೇ ನಿಜವಾದ ದೇವರು. ಸಂಪೂರ್ಣ ಜ್ಞಾನವನ್ನು ತಿಳಿದು ಮತ್ತೊಂದು ಜ್ಞಾನನೇತ್ರವನ್ನು ನೀವು ಸಂಪಾದಿಸಿಕೊಂಡ ದಿನ, ನಿಮಗೆ ನಿಜವಾದ ದೇವರು ಯಾರೋ ತಿಳಿಯಬಲ್ಲದು.

ನೀವು ದೇವರನ್ನು ತಿಳಿಯಬೇಕೆಂದರೆ ತ್ರೈತ ಸಿದ್ಧಾಂತ ಭಗವದ್ಗೀತೆ ಯನ್ನು ಓದಿರಿ. ನಾನೇ ದೇವರು ಎಂದು ಒಂದು ಕಡೆ, ನಾನು ದೇವರು ಅಲ್ಲವೆಂದು ಮತ್ತೊಂದು ಕಡೆ, ನಾನೇ ಎಲ್ಲಾ ಮಾಡುತ್ತಿದ್ದೇನೆಂದು ಒಂದು ಕಡೆ, ನಾನೇನೂ ಮಾಡಲಿಲ್ಲವೆಂದು ಮತ್ತೊಂದು ಕಡೆ, ನಾನು ಹುಟ್ಟುವವನೇ ಅಲ್ಲವೆಂದು ಒಂದು ಕಡೆ, ನನಗೆ ಅವಶ್ಯಕವಿದ್ದಾಗ ಹುಟ್ಟುತ್ತಿದ್ದೇನೆಂದು ಮತ್ತೊಂದು ಕಡೆ ಪರಸ್ಪರ ವಿರುದ್ಧ ವಾಕ್ಯಗಳನ್ನು ಹೇಳಿದ ದೇವರನ್ನು ಕಂಡುಕೊಳ್ಳಿರಿ. ಇಲ್ಲಿ ಪರಸ್ಪರ ವಿರುದ್ಧ ವಾಕ್ಯಗಳು ದೇವರ ವಾಕ್ಯಗಳಾಗಿ ಇರುತ್ತವಾ ಎಂದು ಕೆಲವರಿಗೆ ನನ್ನ ಮೇಲೆ ಅನುಮಾನ ಬರಬಹುದು. ಪ್ರಶ್ನೆ ಹುಟ್ಟಿಸಿ, ಹುಡುಕಿಸಿ, ಉತ್ತರ ಸಿಗುವಂತೆ ಮಾಡುವುದು ದೇವರ ವಿಧಾನ. ಆದ್ದರಿಂದ ಪ್ರಶ್ನೆಯೊಂದಿಗೆ ನಿಲ್ಲಬೇಡಿ. ಉತ್ತರಕ್ಕೋಸ್ಕರ ಹುಡುಕಿರಿ, ಅಲ್ಲಿಗೇ ನಿಲ್ಲಿಸಬೇಡಿ, ಪೂರ್ತಿ ಉತ್ತರ ಸಿಗುವವರೆಗು ಹುಡುಕಿರಿ ಆಗ ತಿಳಿಯುತ್ತಾನೆ ದೇವರು ಯಾರೋ!

ಮುಖ್ಯವಾಗಿ ಹೇಳುವುದೇನೆಂದರೇ! ನಿಮಗೆ ಸಿಕ್ಕಿರುವ ಸ್ವಲ್ಪ ಉತ್ತರದಿಂದಲೇ ಗೋಡೆಕಟ್ಟಿಕೊಂಡು ಕುಳಿತುಕೊಳ್ಳಬೇಡಿ. ಎಲ್ಲಿ ಪ್ರಶ್ನೆ ಬಾರದ ಉತ್ತರ ಸಿಗುತ್ತದೋ, ಯಾವಾಗ ಯಾರೂ ಎದುರಾಡದ ಜ್ಞಾನ ಸಿಗುತ್ತದೋ, ಆಗಲೇ ದೇವರು ಯಾರೋ ತಿಳಿಯುತ್ತದೆ. ಆದರೆ, ಇಂದಿನ ಕಾಲದಲ್ಲಿ

ದೇವರೇ ಇಳಿದು ಬಂದು, ಈ ಕೃಷ್ಣನಾಗಿ ಹೇಳಿದರೂ ಕೇಳದೆ ನನ್ನದು ಇಂತಹ ಮತವೆಂದು, ನನ್ನ ಮಾತೇ ಕೇಳಬೇಕೆಂದು ಅಂದುಕೊಳ್ಳುತ್ತಿರುವವರು. ಅಂತಹವರು ವ್ಯರ್ಥರಾಗುತ್ತಾರೆ. ಮತಗಳಿಗೆ ಅತೀತವಾಗಿ ಯೋಚಿಸಿರಿ. ಮತದ ಹದ್ದಿನಲ್ಲಿ ಮಾತನಾಡಬೇಡಿ. ದೇವರ ಬಳಿಗೆ ಸೇರುವುದಕ್ಕೆ ಮತದಲ್ಲಿ ಮಾರ್ಗ ಸಿಗುವುದಿಲ್ಲ. ಮತಾತೀತನಾದಾಗಲೇ ಮಾರ್ಗ ಸಿಗುತ್ತದೆ.

ನನಗೆ ಈ ಅವಕಾಶ ಕಲ್ಪಿಸಿದ ಈ ಮಾಯೆ ಕೃಷ್ಣನಿಗೆ, ದೇವದೇವನಾದ ಈತನಿಗೆ ನಾನು ನಮಸ್ಕರಿಸುತ್ತಿದ್ದೇನೆ. ನಾನು ದೇವರಲ್ಲದ ಕೃಷ್ಣನಿಗೆ ಮುಗಿಯದೆ, ದೇವರಾದ ಕೃಷ್ಣನಿಗೇ ಮುಗಿಯುತ್ತಿದ್ದೇನೆ. ಇದೇ ನನ್ನ ಸಂದೇಶ.

**ಸೃಷ್ಟಿಕರ್ತ, ಪರಮಾತ್ಮ ಶ್ರೀಕೃಷ್ಣನಿಗೆ ಜೈ !!!**



# ಮೂಢ ಪಂಡಿತರು

ಅದು ಒಂದು ಯಜ್ಞ ಕಾರ್ಯಕ್ರಮ. ಅದರಲ್ಲಿ ಕೆಲವರು ಪಂಡಿತರು ಯಜ್ಞ ಮಾಡುವುದಕ್ಕೆ ತಯಾರಾಗಿದ್ದಾರೆ. ಯಜ್ಞ ಪ್ರಾರಂಭವಾಗುತ್ತಿದೆ. ಪಂಡಿತರು ಅವರವರ ಮಂತ್ರೋಚ್ಚಾರಣೆಯಲ್ಲಿ ನಿಮಗ್ನರಾಗಿದ್ದಾರೆ. ಆ ಯಜ್ಞದ ಹೆಸರು "ಭೂ ಮಾತಾ ಯಜ್ಞ" ಎಲ್ಲಾ ತರಾತುರಿಯಾಗಿ ಇದೆ. ಅಲ್ಲಿಗೆ ಒಬ್ಬ ಬಿಕ್ಷಕನು ಬಂದು ಬಿಕ್ಷೆ ಬೇಡಿಕೊಳ್ಳುತ್ತಾನೆ. ಅಲ್ಲಿರುವ ಪಂಡಿತರು ಬಿಕ್ಷಕನನ್ನು ಗದರಿಸುತ್ತಾರೆ. ಬಿಕ್ಷಕನು ಮೊಂಡನಂತೆ ಇರುತ್ತಾನೆ. ಅಷ್ಟರಲ್ಲಿ ಒಬ್ಬ ಹೇತುವಾದಿ ಬಂದು ಮಾತನಾಡುವುದಕ್ಕೆ ಆರಂಭಿಸುತ್ತಾನೆ.

**ಹೇತುವಾದಿ :–** ಏನು ಮನುಷ್ಯರಯ್ಯಾ ನೀವು? ಅವನು ಹಸಿವುಗೊಂಡು ಹೊಟ್ಟೆಯ ಉರಿಯನ್ನು ತಡೆಯಲಾರದೆ, ಯಾವುದೋ ಒಂದು ಕೊಡಿರೆಂದು ಕೇಳಿದರೇ ಗದರಿಸಿ ಹೋಗೆನ್ನುತ್ತೀರಾ? ಹುಟ್ಟಿದಾಗಿನಿಂದ ತುಪ್ಪವನ್ನು ನೋಡದವರು, ತುಪ್ಪದ ರುಚಿ ಹೇಗಿರುತ್ತದೋ ತಿಳಿಯದವರು, ಈ ದೇಶದಲ್ಲಿ ಬಹಳ ಜನ ಇದ್ದಾರೆ. ಡಬ್ಬ ಡಬ್ಬಗಳ ತುಪ್ಪವನ್ನು ಅಗ್ನಿಯಲ್ಲಿ ಹಾಕುವುದಕ್ಕಿಂತ,

ಒಂದು ಕೇಜೀ ತುಪ್ಪ ಇಂತಹ ಬಡವನಿಗೆ ಕೊಟ್ಟರೇ, ಕೊಟ್ಟಿರುವುದಕ್ಕೆ ನಿಮಗೆ ಪುಣ್ಯ, ತೆಗೆದುಕೊಂಡಿರುವುದಕ್ಕೆ ಆತನಿಗೆ ಸಂತೋಷವಾದರೂ ಇರುತ್ತದೆ. ಇತ್ತ ಪುಣ್ಯಕ್ಕಾಗಲೀ, ಅತ್ತ ಪುರುಷಾರ್ಥಕ್ಕಾಗಲೀ ಸಂಬಂಧವಿಲ್ಲದ ಕೆಲಸವನ್ನು ನೀವು ಮಾಡುತ್ತಿದ್ದೀರ.

1) ಚಿಕ್ಕ ಮಗು ಅಳುತ್ತಿದ್ದರೇ ಅನ್ನ ಇಡಲಾರದ ಆರ್ಥಿಕ ತೊಂದರೆಗಳಲ್ಲಿ ಎಷ್ಟೋ ಜನರಿರುವಾಗ, ಭಕ್ತಿ ಎನ್ನುವ ಹೆಸರಿನಿಂದ ದೇವತೆಗಳ ಕೊರಳಲ್ಲಿ ಬಂಗಾರ, ದೇವತೆಗಳ ಗುಡಿಗಳಲ್ಲಿ ಬಂಗಾರ ತುಂಬಿಸುವುದು ಸಾಟಿ ಮನುಷ್ಯ ಮಾಡುವಂತಹ ಕೆಲಸವೇನಾ? 2) ಎದುರಿಗಿರುವವನು ಕೇಳುತ್ತಿದ್ದರೂ ಒಂದು ಹಿಡಿ ಅನ್ನ ಇಡದಂತೆ, ಕೇಳದ ಮೂಗ ದೇವತೆಗಳಿಗೆ, ತಿನ್ನದ ಕಲ್ಲುಗಳಿಗೆ ರುಚಿಯಿಂದ ಕೂಡಿಕೊಂಡ ನೈವೇದ್ಯಗಳು ಇಡುವುದು ಒಳ್ಳೆಯದಾ? 3) ನೀವು ಮಾಡುವ ಯಜ್ಞಗಳಲ್ಲಿ ವೃಥಾವಾಗಿ ಸುಡುವ ಬಟ್ಟೆಗಳು, ಬಂಗಾರ, ತುಪ್ಪ, ಧಾನ್ಯಗಳನ್ನು ಇತರರ ಆಹಾರಕ್ಕೆ ಉಪಯೋಗಿಸಿದರೇ ಎಷ್ಟು ಒಳ್ಳೆಯ ಕೆಲಸ ಆಗುತ್ತದೋ ಸ್ವಲ್ಪವಾದರೂ ಯೋಚಿಸಿದ್ದೀರಾ?

1) ಮಗಳ ಮದುವೆಗೆ ಅರ್ಧ ತೊಲ ಬಂಗಾರವೂ ಸಹ ಕೊಳ್ಳಲಾರದ ತಂದೆಯರು ಎಷ್ಟೋ ಇರುವಾಗ, ಕೆಲವು ಕೇಜಿಗಳ ಬಂಗಾರ ಹೊರುತ್ತಿರುವ ಪ್ರತಿಮೆಗಳು ಎಷ್ಟೋ ಇವೆ.

2) ಹಸುಕಂದನಿಗೆ ಹಾಲು ಇಲ್ಲದೆ ಹಣ ಕೊಟ್ಟು ಕೊಂಡುತಂದು ಕುಡಿಸಲಾರದೆ, ಬಾಧೆಪಡುವ ತಾಯಂದಿರು ಎಷ್ಟೋ ಇರುವಾಗ, ನೂರು ಲೀಟರ್‌ಗಳ ಹಾಲು ನೆತ್ತಿಮೇಲೆ ಸುರಿಸಿಕೊಳ್ಳುವ ಪ್ರತಿಮೆಗಳು ಎಷ್ಟೋ ಇವೆ.

3) ಕಟ್ಟಿಕೊಳ್ಳುವುದಕ್ಕೆ ಹಳೆ ಬಟ್ಟೆಗಳು ಸಹ ಇಲ್ಲದೆ, ಚಳಿಗೆ ಬಾಧೆಪಡುತ್ತಿರುವ ಬಡವರಿದ್ದರೇ ಬೆಚ್ಚನೆಯ ಗುಡಿಗಳಲ್ಲಿ ರೇಷ್ಮೆ ವಸ್ತ್ರಗಳು ಕಟ್ಟಿಕೊಂಡ ಪ್ರತಿಮೆಗಳು ಎಷ್ಟೋ ಇವೆ.

4) ಊಟ, ಬಟ್ಟೆ ಇಲ್ಲದ ಮನುಷ್ಯರು ಎಷ್ಟೋ ಇರುವ ಈ ದೇಶದಲ್ಲಿ ಊಟ,

ಬಟ್ಟೆ, ಬಂಗಾರ ಇರುವ ದೇವತೆಗಳು ಎಷ್ಟೋ ಇದ್ದಾರೆ. ಊಟ ಬಟ್ಟೆ ಬಂಗಾರ ಬಾಧೆಗಳು ಬೀಳುವ ಮನುಷ್ಯನಿಗೆ ಅವಶ್ಯಕವಾ? ಬಾಧೆಗಳು ಇಲ್ಲದ ದೇವತೆಗಳಿಗೆ ಅವಶ್ಯಕವಾ?

ನಮಗಿಂತ ಮೀರಿದ ಜ್ಞಾನಿಗಳು ಇಲ್ಲವೆನ್ನುವ ಭಾವನೆಯಿಂದ ನೀವಿದ್ದೀರ. ನಮ್ಮಂತಹವರು ನಿಜ ಹೇಳಿದರೇ ನಾಸ್ತಿಕರೆಂದು, ಹೇತುವಾದಿಗಳೆಂದು ನಮ್ಮನ್ನು ಅನ್ನುತ್ತೀರ. ನಿಮಗೆ ಬುದ್ಧಿ ಹೇಳುವ ಜ್ಞಾನಿಗಳು ಶೀಘ್ರದಲ್ಲೇ ಬರುತ್ತಾರೆ.

(ಅಷ್ಟರಲ್ಲಿ ಬಿಳಿಯ ಚಕ್ರಗಳು ಹಣೆಯ ಮೇಲೆ ಧರಿಸಿದ ನಾಲ್ವರು (ಭಟರು) ಅಲ್ಲಿಗೆ ಬರುತ್ತಾರೆ. ಅವರ ಕೈಗಳಲ್ಲಿ ಕೆಲವು ಬರಹಗಳ ಬೋರ್ಡುಗಳು ಇವೆ. ಆ ಸಮಯದಲ್ಲಿ ಒಂದು ನಿಶ್ಶಬ್ದ ಏರ್ಪಡುತ್ತದೆ. ಮಂತ್ರಗಳು ಓದುತ್ತಿರುವ ಪಂಡಿತರ ಗಂಟಲಲ್ಲಿ ಶಬ್ದ ಬರಲಿಲ್ಲ. ಅವರು ಬಾಯಿ ಅಲ್ಲಾಡಿಸಿದರೂ ಗಂಟಲುಗಳು ಮೂಗವಾಗಿವೆ. ಬಂದಿರುವವರು ಗದರಿಸಿ ಪಂಡಿತರನ್ನು ಬಾಯಿ ಕೂಡ ತೆರೆಯದಂತೆ ಮಾಡಿದ್ದಾರೆ.)

**ಭಟರು :–** ಮೂರ್ಖ ಪಂಡಿತರೇ! ನಿಮ್ಮ ಬಾಯಿಗಳು ಬಿದ್ದು ಹೋದರೂ, ನಿಮಗೆ ಇನ್ನೂ ಬುದ್ಧಿ ಬರಲಿಲ್ಲ. ಶಬ್ದ ಬರದಿದ್ದರೂ ಪ್ರಯತ್ನಿಸಿ ಬಾಯಿ ಅಲ್ಲಾಡಿಸುತ್ತಿದ್ದೀರ. ಬಾಯಿ ಮುಚ್ಚಿರಿ.

**ಪಂಡಿತರು :–** (ಕೈಯಿಂದ ಸನ್ನೆ ಮಾಡುತ್ತಾ) ನೀವು ಯಾರು ಎನ್ನುವಂತೆ ಕೇಳಿದ್ದಾನೆ.

**ಭಟರು :–** ನಾವು ಜ್ಞಾನಿಗಳು. ನಿಮ್ಮ ಮೂಢತ್ವವನ್ನು ನೋಡಿ ನಿಮಗೆ ಬುದ್ಧಿ ಹೇಳಲು ಬಂದಿದ್ದೇವೆ.

**ಪಂಡಿತರು :–** (ಅಷ್ಟರಲ್ಲಿ ಒಬ್ಬನು ತಮ್ಮ ಬಾಯನ್ನು ತೋರಿಸಿ ನಮಗೆ ಮಾತು ಬರುವಂತೆ ಮಾಡೆಂದು ಕೋರುತ್ತಾನೆ.)

**ಭಟರು :–** (ಅಷ್ಟರಲ್ಲಿ ಒಬ್ಬ ಭಟನು) ನಿನಗೆ ಮಾತು ಬರುವಂತೆ ಮಾಡುತ್ತೇವೆ. ನಮ್ಮ ಮಾತು ಕೇಳುತ್ತೀಯಾ?

**ಪಂಡಿತರು :–** ಊ.. ಊ.. ಎಂದು ಮುಲುಗುತ್ತಾ ಕೇಳುತ್ತೇನೆ ಎಂದು ಸನ್ನೆ ಮಾಡಿದ್ದಾನೆ.

**ಭಟರು :–** ನಮ್ಮಲ್ಲಿ ದೈವಶಕ್ತಿಯಾದ ಜ್ಞಾನಶಕ್ತಿ ಇದ್ದರೆ, ನಮ್ಮ ಶಕ್ತಿಯಿಂದ ಇವರ ಕರ್ಮ ಸುಟ್ಟುಹೋಗಿ ಬಾಯಿಂದ ಮಾತು ಬರಲಿ. ಎಂದು ಅನ್ನುತ್ತಲೇ ಪಂಡಿತರಿಗೆ ಬಾಯಲ್ಲಿ ಮಾತುಗಳು ಬಂದಿವೆ. ನೀವು ಯಜ್ಞ ಮಾಡುತ್ತಿದ್ದೀರಲ್ಲ! ಯಜ್ಞವೆಂದರೇ ನಿಜಾರ್ಥ ತಿಳಿದಿದೆಯಾ?

**ಪಂಡಿತರು :–** ತಿಳಿದಿದೆಯಾ ಎಂದರೇ ಸ್ವಲ್ಪ ತಿಳಿದಿದೆ.

**ಭಟರು :–** ಏನು ತಿಳಿದಿದೆಯೋ ಹೇಳಿರಿ?

**ಪಂಡಿತರು :–** ದೇವತೆಗಳಿಗೆ ಪ್ರೀತಿಗೋಸ್ಕರ, ದೇವತೆಗಳಿಗೆ ನಾವು ಕೊಡುವ ವಸ್ತುಗಳು ಸೇರುವುದಕ್ಕಾಗಿ ಯಜ್ಞ ಮಾಡುತ್ತಿದ್ದೇವೆ.

**ಭಟರು :–** ದೇವತೆಗಳಾ! ಯಾರು ಆ ದೇವತೆಗಳು! ತಮಗಿಂತ ದೊಡ್ಡವನು ಒಬ್ಬ ದೇವರು ಇದ್ದಾನೆಂದು, ಅವರೇ ದೇವರನ್ನು ಭಕ್ತಿಯಿಂದ ಮುಗಿಯುತ್ತಿದ್ದರೆ, ಅಸಲಾದ ದೇವರನ್ನು ಬಿಟ್ಟು ಬೇರೆಯವರಿಗೆ ದೇವತೆಗಳೆಂದು ಹೆಸರಿಟ್ಟು, ನೀವು ಯಜ್ಞಗಳು ಮಾಡುವುದು ಜ್ಞಾನವೆನ್ನುತ್ತೀರಾ?

**ಪಂಡಿತರು :–** ನಾವು ಬೇರೆ ದೇವತೆಗಳಿಗೆ ಯಜ್ಞ ಮಾಡಲಿಲ್ಲ, ಭೂ ಮಾತೆಗೆ ಮಾಡುತ್ತಿದ್ದೇವೆ.

(ಅಷ್ಟರಲ್ಲಿ ವಿಚಿತ್ರ ಶಬ್ದ ಏರ್ಪಟ್ಟಿದೆ. ಅಟ್ಟಹಾಸ ಮಾಡುತ್ತಾ ಶರೀರವೆಲ್ಲಾ ಮಣ್ಣು ತುಂಬಿದ ವ್ಯಕ್ತಿ ಅಲ್ಲಿಗೆ ಬಂದಿದ್ದಾನೆ.)

**ಭೂಮಿ :–** ಎಲೈ ಪಂಡಿತರೇ! ನಾನು ಭೂಮಿ ಮಾತನಾಡುತ್ತಿದ್ದೇನೆ. ನೀವು

ಅಧರ್ಮವಾದ ಯಜ್ಞಗಳು ಮಾಡುವುದೇ ಅಲ್ಲದೆ, ನನ್ನನ್ನು ಸಹ ಸೇರಿಸಿಕೊಂಡು ನನ್ನ ಹೆಸರಿನಿಂದ ಯಜ್ಞ ಮಾಡುತ್ತೀರಾ! ಯಜ್ಞವೇ ಒಂದು ದೊಡ್ಡ ಅಧರ್ಮ, ಅಜ್ಞಾನವಾದರೇ, ಅದರಲ್ಲಿ ನನ್ನನ್ನು ಕೂಡ ಸೇರಿಸಿ ಭೂಮಾತಾಯಜ್ಞವೆಂದು, ನನ್ನ ಹೆಸರು ಇಟ್ಟು ಏಕೆ ಮಾಡುತ್ತಿದ್ದೀರ.

**ಪಂಡಿತರು :–** ಭೂಮಾತಾಯಜ್ಞವನ್ನು ಮಾಡಿದರೇ ಬೆಳೆಗಳು ಚೆನ್ನಾಗಿ ಬೆಳೆಯುತ್ತವೆಂದು, ಪ್ರಜೆಗಳು ಸುಖವಾಗಿ ಇರುತ್ತಾರೆಂದು ಮಾಡುತ್ತಿದ್ದೇವೆ.

**ಭೂಮಿ :–** ಆಹಾ ಇಷ್ಟೊಂದು ಮೋಸವಾ? ನೀವು ಪಂಡಿತರೆಂದು ಕರೆಯಿಸಿಕೊಳ್ಳುವುದಕ್ಕೆ ತಕ್ಕವರೇನಾ? ನನ್ನ ಹೆಸರು ಹೇಳಿ ಪ್ರಜೆಗಳನ್ನು ಮೋಸ ಮಾಡುತ್ತೀರಾ? ನನ್ನ ಹೆಸರು ಇಟ್ಟು ಯಜ್ಞ ಮಾಡಿದರೇ ಬೆಳೆಗಳು ಚೆನ್ನಾಗಿ ಬೆಳೆಯುತ್ತವೆಂದು ನಾನು ಯಾರೊಂದಿಗಾದರೂ ಹೇಳಿದ್ದೇನಾ? ನಾನು ಯಾರಿಗೂ ಹೇಳದ ವಿಷಯವನ್ನು ನೀವೇಕೆ ಹೇಳುತ್ತಿದ್ದೀರ? ನಿನಗೆ ಯಜ್ಞ ಮಾಡೆಂದು ನಿನ್ನೊಂದಿಗೆ ಹೇಳಿದ್ದೇನಾ? ನಿನ್ನೊಂದಿಗೆ ಹೇಳಿದ್ದೇನಾ? ಹೇಳಿರಿ.

**ಪಂಡಿತರು :–** ಇಲ್ಲ ತಾಯಿ! ನಮ್ಮನ್ನು ಕ್ಷಮಿಸು.

**ಭೂಮಿ :–** ಏನು ನಾನು ತಾಯಿನಾ? ನನ್ನ ಹೆಸರು ಭೂಮಾತೆಯಾ? ಏನೂ ತಿಳಿಯದ ಪ್ರಜೆಗಳು, ನಿಮ್ಮ ಮಾತುಗಳು ಕೇಳಿ ನನ್ನನ್ನು ಹೆಂಗಸಾಗಿ ಲೆಕ್ಕಿಸಿಕೊಳ್ಳುವುದಿಲ್ಲವಾ? ಯಾರು ಹೇಳಿದ್ದಾರೆ. ನಾನು ಸ್ತ್ರೀಯೆಂದು ಹೇಳಿರಿ.

**ಪಂಡಿತರು :–** ಪ್ರಕೃತಿ ಸ್ತ್ರೀ ಸ್ವರೂಪವೆಂದು ಭಗವದ್ಗೀತೆಯಲ್ಲಿ ಓದಿದ್ದೇವೆ.

**ಭೂಮಿ :–** ಪ್ರಕೃತಿ ಎಂದರೇ ಐದು ಭಾಗಗಳು ತಿಳಿದಿದೆಯಾ! ಅದರಲ್ಲಿ ನಾನು ಒಬ್ಬನು, ನಾನು ಪ್ರಕೃತಿಯಲ್ಲಿ ಒಂದು ಭಾಗವಾದಷ್ಟು ಮಾತ್ರಕ್ಕೆ ನನ್ನನ್ನು ಸ್ತ್ರೀಯಾಗಿ ಲೆಕ್ಕಿಸಿಕೊಳ್ಳುವುದು ತಪ್ಪಲ್ಲವೇ? ನಾನು ಪ್ರಕೃತಿಯಲ್ಲಿ ಒಬ್ಬನು ಆದ್ದರಿಂದ ನೀವು ನನ್ನನ್ನು ಸ್ತ್ರೀಯಾಗಿ ಹೋಲಿಸಿ ಹೇಳಿಕೊಂಡರೇ, ಅದೇ ಪದ್ಧತಿ ಪ್ರಕಾರ ಅಗ್ನಿಯನ್ನು ಅಗ್ನಿ ಮಾತಾ ಎನ್ನಬೇಕಲ್ಲವೆ? ಹಾಗೆ ಏಕೆ ಅನ್ನಲಿಲ್ಲ. ಅಗ್ನಿ

ದೇವರೆಂದು ಏಕೆ ಅನ್ನುತ್ತಿದ್ದೀರ. ಗಾಳಿಯನ್ನು ಗಾಳಿಮಾತೆ ಎನ್ನಬಹುದಲ್ಲವೆ? ಗಾಳಿ ದೇವರೆಂದೂ, ವಾಯುದೇವರೆಂದೂ ಏಕೆ ಅನ್ನುತ್ತಿದ್ದೀರ. ಗಾಳಿಗೆ ಹುಟ್ಟಿದವನು ಆಂಜನೇಯನೆಂದು ಹೇಳಿಕೊಳ್ಳುತ್ತಿದ್ದೀರಲ್ಲ. ಆಗ ಸ್ತ್ರೀಯಾಗಿ ಗಾಳಿಯನ್ನು ಏಕೆ ಹೇಳಲಿಲ್ಲ? ಪ್ರಕೃತಿಯಲ್ಲಿ ಭಾಗಗಳಾದ ಅಗ್ನಿಯನ್ನು ಅಗ್ನಿ ದೇವರೆಂದೂ, ವಾಯುವನ್ನು ವಾಯುದೇವರೆಂದೂ ಕರೆಯುವ ನೀವು, ನನ್ನನ್ನೇನೋ ಭೂಮಾತ ಎಂದು ಕರೆಯುತ್ತಿದ್ದೀರ ಏಕೆ?

***(ಅಲ್ಲಿ ಒಂದು ವಿಧವಾದ ಶಬ್ದ ಏರ್ಪಟ್ಟಾಗ ಎಲ್ಲರೂ ಆಶ್ಚರ್ಯವಾಗಿ ನೋಡುತ್ತಿರುವಾಗ ಅಲ್ಲಿಗೆ ವಾಯು, ಅಗ್ನಿ ಇಬ್ಬರೂ ಪ್ರವೇಶಿಸುತ್ತಾರೆ.)***

**ಅಗ್ನಿ :–** ಏನು ಭೂಮಿ! ನೀನು ನಮ್ಮ ಹೆಸರುಗಳನ್ನು ಹೇಳುತ್ತಿದ್ದೀಯ.

**ಭೂಮಿ :–** ಹೌದು. ನಾನು ಕೂಡಾ ನಿಮ್ಮೊಂದಿಗೆ ಪುರುಷನೇ ಅಲ್ಲವೆ! ಇವರು ನನ್ನನ್ನು ಭೂಮಾತಾಯೆಂದೂ, ಭೂದೇವೀ ಎಂದು ಕರೆಯುತ್ತಿದ್ದಾರೆ. ಅದೇ ವಿಷಯವನ್ನು ಕುರಿತು ವಾಯುವನ್ನು ವಾಯುದೇವರೆಂದೂ, ಅಗ್ನಿಯನ್ನು ಅಗ್ನಿ ದೇವರೆಂದು ಹೇಳುವ ಇವರು ನನ್ನನ್ನು ಮಾತ್ರ ಹೆಣ್ಣಾಗಿ ಹೇಳುವುದೇಕೆಂದು ಪ್ರಶ್ನಿಸುತ್ತಿದ್ದೇನೆ.

**ಅಗ್ನಿ :–** ಭೂಮಿ ಮೇಲೆ ನಾವು ಎಷ್ಟೋ ಜ್ಞಾನಿಗಳೆಂದೂ, ಸರ್ವಜ್ಞರೆಂದೂ ಹೇಳಿಕೊಳ್ಳುವ ಇವರು, ನಿನ್ನನ್ನು ಸ್ತ್ರೀಯಾಗಿಯೇ ಕರೆಯುತ್ತಿದ್ದಾರೆ. ಅಷ್ಟೇ ಹೊರತು, ನಿನ್ನನ್ನು ಎಲ್ಲೂ ಬಳಸಲಿಲ್ಲ. ನನ್ನನ್ನಾದರೇ ನೇರವಾಗಿ ಗುಮಾಸ್ತನನ್ನೇ ಮಾಡಿದ್ದಾರೆ. ಇವರು ಯಜ್ಞ ಕುಂಡದಲ್ಲಿ ಹಾಕುವ ರೇಷ್ಮೆ ಸೀರೆಗಳು, ಆಭರಣಗಳಿಂದ ಹಿಡಿದುಪ್ರತಿಯೊಂದೂ ಯಾರಿಗೆ ಸಮರ್ಪಿಸಿದರೆ ಅವರಿಗೆ ಸೇರಿಸುವುದಕ್ಕೆ, ಆ ವಸ್ತುಗಳನ್ನು ಸುಟ್ಟು ಹೊಗೆರೂಪದೊಳಗೆ ಬದಲಾಯಿಸಿ ಕಳುಹಿಸಬೇಕಂತೆ!

**ವಾಯು :–** ನೀನು ಹೊಗೆರೂಪದೊಳಗೆ ಬದಲಾಯಿಸಿದರೇ, ಆ ಹೊಗೆ ರೂಪದಲ್ಲಿರುವ ವಸ್ತುಗಳನ್ನು ಇವರು ಯಾರ ಹೆಸರು ಹೇಳಿ ಸಮರ್ಪಿಸಿದ್ದಾರೋ

ಅವರಿಗೆ ಸೇರಿಸಬೇಕಂತೆ. ಇವರ ಲೆಕ್ಕದಲ್ಲಿ ನಾನು ಕೂಡಾ ಗುಮಾಸ್ತಾನೆ! ಯಜ್ಞಗಳು ಮಾಡಿದರೇ ಲಾಭಗಳು ಉಂಟಾಗುತ್ತವೆಂದು ಭ್ರಮಿಸಿ, ನಮ್ಮನ್ನು ನಿಮ್ಮ ಕೆಲಸದಾಳುಗಳನ್ನಾಗಿ ಪ್ರಚಾರ ಮಾಡುತ್ತೀರಾ? ತಿಳಿಯದ ಪ್ರಜೆಗಳು ನಾವು ಅಂತಹ ಕೆಲಸಗಳು ಮಾಡುವವರೆಂದು ಅಂದುಕೊಳ್ಳುವುದಿಲ್ಲವಾ? ಪ್ರಕೃತಿಯಲ್ಲಿ ಭಾಗಗಳಾದ ನಾವು, ದೇವರ ಆಜ್ಞೆ ಪ್ರಕಾರ ಕೆಲಸ ಮಾಡುತ್ತಿದ್ದೇವೆ. ಆದರೆ ಮನುಷ್ಯರ ಅಜ್ಞೆಗಳ ಪ್ರಕಾರ ಕೆಲಸಗಳು ಮಾಡುತ್ತಿಲ್ಲ. ನೀವು ಮಾಡುವ ಯಜ್ಞಗಳಿಂದ, ಪ್ರಜೆಗಳು ನಮ್ಮನ್ನು ತಪ್ಪಾಗಿ ಅರ್ಥ ಮಾಡಿಕೊಳ್ಳುವ ಅವಕಾಶವಿದೆ. ಪಂಡಿತರೆಂದು ಹೆಸರಿಟ್ಟುಕೊಂಡ ನೀವು, ನಮ್ಮನ್ನು ಕೆಲಸದಾಳುಗಳನ್ನಾಗಿ ಪ್ರಚಾರ ಮಾಡುವುದು ಸರಿಯೇನಾ! ನೀವು ಮಾಡುವ ಯಜ್ಞದಲ್ಲಿ ಅತ್ತ ಭೂಮಿ, ಇತ್ತ ನೀರಿಗಿಂತ ಅಗ್ನಿ ವಾಯುಗಳಾದ ನಮ್ಮನ್ನೇ ಹೆಚ್ಚಾಗಿ ಬಳಸಿಕೊಳ್ಳುತ್ತಿದ್ದೀರ. ಇದು ನಿಮಗೆ ಧರ್ಮವಾ?

***(ಆಗ ಮತ್ತೊಂದು ವಿಚಿತ್ರ ಶಬ್ದ ಏರ್ಪಡುತ್ತದೆ. ಅಷ್ಟರಲ್ಲಿ ಅಲ್ಲಿಗೆ ನೀರು ಕೂಡಾ ಬರುತ್ತದೆ.)***

**ನೀರು :–** ಏನು? ಇಲ್ಲಿ ಭೂಮಿ, ಅಗ್ನಿ, ವಾಯು ಮೂವರೂ ಇದ್ದೀರ. ನನ್ನ ಹೆಸರನ್ನು ಹೇಳುತ್ತಿದ್ದೀರೇನು?

**ಅಗ್ನಿ :–** ಭಕ್ತಿ ಎನ್ನುವ ಮುಸುಗಿನಲ್ಲಿ ಇವರು ಮಾಡುವ ಅಧರ್ಮ ಕೆಲಸಗಳನ್ನು ವಿಮರ್ಶಿಸುತ್ತಿದ್ದೇವೆ. ನಿಮ್ಮ ಸ್ವಾರ್ಥಕ್ಕಾಗಿ ನಮ್ಮನ್ನು ಏಕೆ ದುಷ್ಪ್ರಚಾರ ಮಾಡುತ್ತಿದ್ದೀರೆಂದು ಕೇಳುತ್ತಿದ್ದೇವೆ.

**ನೀರು :–** ಇವರು ಪಂಡಿತರೆಂದು ಹೆಸರು ಹೊಂದಿ, ಭಕ್ತಿ ಎನ್ನುವ ಹೆಸರಿನಿಂದ ವಕ್ರಮಾರ್ಗದಲ್ಲಿ ಪ್ರಯಾಣಿಸುತ್ತಾ, ಇವರು ಕೆಟ್ಟುಹೋಗುವುದೇ ಅಲ್ಲದೆ, ಇವರನ್ನು ಅನುಸರಿಸುವ ಪ್ರಜೆಗಳೆಲ್ಲಾ ಕೆಟ್ಟುಹೋಗುವಂತೆ ಮಾಡುತ್ತಿದ್ದಾರೆ. ಹಣ್ಣು ಎಂದರೆ ಚೆನ್ನಾಗಿ ಪರಿಪಕ್ವತೆಗೆ ಬಂದಿರುವುದೆಂದು ಅರ್ಥ. ಜ್ಞಾನದಲ್ಲಿ ಚೆನ್ನಾಗಿ ಪಕ್ವಕ್ಕೆ ಬಂದಿರುವವರನ್ನು ಪಂಡಿತರು ಎಂದು ಅನ್ನಬಹುದು. ಆದರೇ ಇವರ ಹತ್ತಿರ

ಜ್ಞಾನ ಸ್ವಲ್ಪವಾದರೂ ಇಲ್ಲ. ಆದರೂ ಪಂಡಿತರೆಂದು ಮುಸುಗು ತಗಲಿಸಿ ಕೊಂಡಿದ್ದಾರೆ. ಭಕ್ತಿ, ವಿಶ್ವಾಸ, ವಿಶ್ವಕ್ಕೆಲ್ಲಾ ಅಧಿಪತಿಯಾದ ದೇವರ ಮೇಲೆ ಇರಬೇಕು. ದೇವರ ಮೇಲೆ ಅಲ್ಲದೆ ಚಿಲ್ಲರೆ ದೇವತೆಗಳ ಮೇಲೆ ಭಕ್ತಿಯನ್ನು ತೋರಿಸುತ್ತಾ ಅವರಿಗೋಸ್ಕರ ಯಜ್ಞಗಳನ್ನು ಮಾಡುವ ಇವರಾ ಪಂಡಿತರು? ಇವರಲ್ಲಿ ಚಿಲ್ಲರೆ ದೇವತೆಗಳ ಭ್ರಮೆ ಹೊರತು ಎಲ್ಲರಿಗು ಅಧಿಪತಿಯಾದ, ಎಲ್ಲ ಮತಗಳಿಗು ದೊಡ್ಡ ದಿಕ್ಕು ಆದ ದೇವರ ಮೇಲೆ ಇವರ ದೃಷ್ಠಿ ಸ್ವಲ್ಪವಾದರೂ ಇಲ್ಲ. ಮಹಾಭೂತಗಳೆಂದು ಹೆಸರುಪಡೆದ ಭೂಮಿಯನ್ನೇನೋ ಭೂಮಾತಾ, ಭೂದೇವಿ ಎಂದು ಸ್ತ್ರೀಯನ್ನು ಮಾಡಿದ್ದಾರೆ. ಅಗ್ನಿ, ವಾಯುಗಳಿಬ್ಬರನ್ನೂ ಅಗ್ನಿ ದೇವರು, ವಾಯುದೇವರೆಂದು ಗಂಡಸರನ್ನಾಗಿ ಮಾಡಿದ್ದಾರೆ. ಕೊನೆಗೆ ನೀರಾದ ನನ್ನನ್ನು ಅತ್ತ ಹೆಣ್ಣು ಅಲ್ಲದಂತೆ, ಇತ್ತ ಗಂಡು ಅಲ್ಲದಂತೆ ಮಾಡಿದ್ದಾರೆ. ನದಿಯಲ್ಲಿ ಇರುವಾಗ ಗಂಗಮ್ಮ ತಾಯಿ ಎಂದು, ಸಮುದ್ರದಲ್ಲಿ ಇರುವಾಗ ಸಮುದ್ರನು ಎನ್ನುತ್ತಿದ್ದಾರೆ. ಇವರು ಹೇಳುವ ಮಾತುಗಳನ್ನನುಸರಿಸಿ, ಕೆಲವರು ಪ್ರಜೆಗಳು ನನ್ನನ್ನು ಹೆಣ್ಣು ಅಲ್ಲದೆ, ಗಂಡು ಅಲ್ಲದೆ ಎರಡಕ್ಕೂ ತಪ್ಪಿದವನೆಂದು ಅಂದುಕೊಳ್ಳುತ್ತಿದ್ದಾರೆ.

ಪುಷ್ಕರಗಳೆಂದು ಹೆಸರಿಟ್ಟು, ಇವರ ಸ್ವಾರ್ಥಕ್ಕಾಗಿ ಶುಭ್ರವಾಗಿ ಹರಿ ಯುತ್ತಿರುವ ನನ್ನನ್ನು ಅಶುಭ್ರ ಮಾಡುತ್ತಿದ್ದಾರೆ. ನನ್ನಲ್ಲಿ ಸ್ನಾನ ಮಾಡಿದರೇ ನಿಮ್ಮ ಪಾಪಗಳನ್ನು ತೊಳೆಯುತ್ತೇನೆಂದು ಯಾರಿಗಾದರೂ ಹೇಳಿದ್ದೇನಾ? ನೀವು ಮಾಡಿಕೊಂಡ ಪಾಪಗಳು ನನ್ನ ನದಿಯಲ್ಲಿ ಸ್ನಾನ ಮಾಡಿದರೇ ಹೋಗುವುದಿಲ್ಲ ಎಂದು ತಿಳಿದುಕೊಳ್ಳುವುದಕ್ಕೆ, ಪುಷ್ಕರಗಳಿಗೆ ಬಂದು ಪುನಃ ಹೋಗುವವರಲ್ಲಿ ಕೆಲವರಿಗೆ ನಾನು ರಸ್ತೆ ಅಪಘಾತಗಳು ಉಂಟುಮಾಡಿ ಕಾಲು, ಕೈಗಳು ಮುರಿಯುವಂತೆ ಮಾಡಿದ್ದೇನೆ. ಆಗಲಾದರೂ ಪುಷ್ಕರಗಳಲ್ಲಿ ಶರೀರದ ಮೇಲಿನ ಮಲಿನ ಹೊರತು, ತಲೆಯಲ್ಲಿನ ಪಾಪಗಳು ಹೋಗುವು ದಿಲ್ಲವೆಂದು ಯಾರಾದರೂ ತಿಳಿದುಕೊಳ್ಳುತ್ತಿದ್ದಾರಾ? ಅದೂ ಇಲ್ಲ. ಪಾಪಗಳು ಹೋದರೇ ಅನುಭವಿಸುವುದು ಇರುವುದಿಲ್ಲ ಅಲ್ಲವೆ! ಹಾಗಿರುವಾಗ ನನಗೆ ಕೈ

ಏಕೆ ಮುರಿದಿದೆ? ಕಾಲು ಏಕೆ ಮುರಿದಿದೆ? ಪ್ರಮಾದ ಏಕೆ ನಡೆದಿದೆ? ಎಂದು ಮೇಧಾವಿಗಳು ಕೂಡ ಆಲೋಚಿಸುತ್ತಿಲ್ಲ. ಯಾರೂ ನಿಜ ತಿಳಿದುಕೊಳ್ಳಲಾರದೆ ಪುಷ್ಕರಗಳ ಹೆಸರಿನಿಂದ ನನ್ನನ್ನೂ, ಯಜ್ಞಗಳ ಹೆಸರಿನೊಂದಿಗೆ ಅಗ್ನಿ, ವಾಯುಗಳನ್ನೂ ಬಾಧಿಸುವ ಇವರ ಮೇಲೆ, ನಮಗೆ ಎಷ್ಟೋ ಕೋಪವಿದ್ದರೂ, ನಾವು ಏನೂ ಅನ್ನದಂತೆ ಇನ್ನೂ ಸ್ವಲ್ಪ ಕಾಲಕ್ಕಾದರೂ ತಿಳಿದುಕೊಳ್ಳುತ್ತಾರೆ ಎಂದು ಸ್ವಲ್ಪ ಸಹನೆಯಿಂದ ಇದ್ದೇವೆ. ಇವರಿಗೆ ನಮ್ಮಂತಹವರಿಗಿಂತ ರಾವಣಬ್ರಹ್ಮನೇ ಸರಿಯಾದವನು. ಏಕೆಂದರೇ ಆತನು ಯಜ್ಞಗಳು ಮಾಡುವುದು ಒಳ್ಳೆಯದಲ್ಲವೆಂದು ಹೊಡೆದು ಹೇಳಿದ್ದಾನೆ.

*(ಅಷ್ಟರಲ್ಲಿ ಒಂದು ವಿಧವಾದ ಶಬ್ದ ಏರ್ಪಡುತ್ತದೆ. ಆಗ ರಾವಣ ಬ್ರಹ್ಮನೇ ಸ್ವತಃವಾಗಿ ಅಟ್ಟಹಾಸದಿಂದ ಅಲ್ಲಿಗೆ ಬರುತ್ತಾನೆ.)*

**ಭಟರು :–** ಓಹೋ! ರಾವಣಬ್ರಹ್ಮ! ತ್ರಿಕಾಲಜ್ಞಾನೀ, ಬ್ರಹ್ಮಜ್ಞಾನೀ, ದೈವಾಂಶ ಸಂಭೂತಾ! ನವಗ್ರಹಗಳನ್ನೇ ಶಾಸಿಸಿದ ಶಾಸನಕರ್ತ! ಧರ್ಮಪ್ರಚಾರಕ! ಅಧರ್ಮಶತ್ರೂ ನಿಮಗಿದೇ ನಮ್ಮ ವಂದನೆ.

**ರಾವಣಬ್ರಹ್ಮ :–** ಏನೂ! ತ್ರೇತಾಯುಗದಲ್ಲಿ ಬ್ರಹ್ಮ ಎಂದು ಹೆಸರುಪಡೆದ ನನ್ನನ್ನು, ಕಲಿಯುಗದಲ್ಲಿ ಈ ವಿಧವಾಗಿ ಹೊಗಳುವುದಾ! ಕಲಿಯುಗದಲ್ಲಿ... ಅಜ್ಞಾನಾಂಧಕಾರದಲ್ಲಿ... ಭ್ರಮಿಸುವ ಮನುಷ್ಯರು, ನನ್ನನ್ನು ದುರ್ಮಾರ್ಗನಾಗಿ... ದುಷ್ಟನಾಗಿ... ಹೇಳಿಕೊಳ್ಳುವ ತರುಣದಲ್ಲಿ, ನನ್ನನ್ನು ಸ್ತುತಿಸುವುದಾ... ಬಹು ಆಶ್ಚರ್ಯವಾಗಿದೆಯೇ... ಯಾರು ನೀವು?

**ಭಟರು :–** ನಾವು ನಿನ್ನ ಅಭಿಮಾನಿಗಳು. ತ್ರೈತ ಸಿದ್ಧಾಂತ ಆದಿಕರ್ತನಾದ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರ ಶಿಷ್ಯರು. ನಮ್ಮ ಗುರುಗಳು ಹೇಳಿದ ಜ್ಞಾನದಿಂದ ನಿಮ್ಮನ್ನು, ನಿಮ್ಮ ಔನ್ನತ್ಯವನ್ನು ಗುರುತಿಸಿದ್ದೇವೆ.

**ರಾವಣಬ್ರಹ್ಮ :–** ಸತ್ಯ ನುಡಿದಿದ್ದೀರ! ಸತ್ಯ ನುಡಿದಿದ್ದೀರ! ಯೋಗೀಶ್ವರರೇ ನಿಮಗೆ ಗುರುವಾಗಿ ಸಿಕ್ಕಿರುವುದಕ್ಕೆ ನೀವು ಧನ್ಯರು. ಒತ್ತಿ ಹೇಳುವ ಸತ್ಯವೇನೆಂದರೇ

ನಿಮ್ಮ ಗುರುವು ಅಗಮ್ಯ, ಅಗೋಚರ, ಅನರ್ಥ, ಅಪಾರನು. ಆತನು ಯಾರಿಗೂ ಅರ್ಥ ಆಗುವುದಿಲ್ಲ, ಅಷ್ಟೇ. ಅಸಲು ವಿಷಯಕ್ಕೆ ಬರೋಣ, ಈಗ ಇಲ್ಲಿ ಭೂಮಿ, ಅಗ್ನಿ, ವಾಯು, ನೀರು ಇವರೆಲ್ಲ ಸೇರಿ ನನ್ನ ನಾಮಧ್ಯೇಯವನ್ನು ಉಚ್ಚರಿಸುವ ಕಾರಣವೇನು?

**ಭಟರು :–** ಇಲ್ಲಿ ಭೂಮಾತಾ ಯಜ್ಞವೆನ್ನುವ ಕಾರ್ಯ ನಡೆಯುತ್ತಿದೆ. ಅದನ್ನು ವಿರೋಧಿಸುವುದಕ್ಕೆ ನಾವು ಬಂದಿದ್ದೇವೆ. ನಮಗೆ ಶ್ರಮ ಇಲ್ಲದಂತೆ ಸತ್ಯ ಹೇಳುವುದಕ್ಕೆ ನಮಗೆ ಸಹಾಯಕರಾಗಿ ಮಹಾ ಭೂತಗಳಾದ ಭೂಮಿ, ಅಗ್ನಿ, ವಾಯು, ನೀರು ಬಂದಿದ್ದಾರೆ. ಅವರ ಮಾತುಗಳಲ್ಲಿ ನಿಮ್ಮ ಹೆಸರು ಬಂದಿದೆ.

**ರಾವಣಬ್ರಹ್ಮ :–** ಹಾಗಾ! ಸಾರಾಂಶ ಅರ್ಥವಾಗಿದೆ. ಮಹಾಭೂತಗಳೇ ನೀವೇನೆಂದಿದ್ದೀರ?

**ಭೂತಗಳು :–** ನಾವು ಈ ಕಾರ್ಯ ಸರಿಯಲ್ಲವೆಂದು, ಅಜ್ಞಾನವೆಂದೂ, ಅಧರ್ಮವೆಂದೂ ಹೇಳುತ್ತಿದ್ದೇವೆ. ಸ್ವತಃವಾಗಿ ತಾವೇ ಬಂದಿದ್ದೀರ, ನಮಗೆ ಸಂತೋಷ.

**ರಾವಣಬ್ರಹ್ಮ :–** ನನ್ನ ನಾಮಧೇಯ ರಾವಣ! ನವಗ್ರಹಗಳ ಮುಖತಾ ಬ್ರಹ್ಮ ಬಿರುದಾಂಕಿತನಾಗಿ, ರಾವಣ ಬ್ರಹ್ಮಯೆಂದು ಹೆಸರುಪಡೆದ ನನ್ನನ್ನು, ಒಬ್ಬ ಅಸುರನಾಗಿ ಭಾವಿಸಿ, ರಾವಣಾಸುರ ಎಂದು ಕರೆಯುವ ಈ ಕಲಿಯುಗ ವಾಸಿಗರನ್ನು ಮೂರ್ಖರೆನ್ನಬೇಕೋ ಅಥವಾ ಮೂಢರೆನ್ನಬೇಕೋ ನನಗೇ ಅರ್ಥವಾಗಲಿಲ್ಲ.

ನನ್ನಲ್ಲಿ ಅಸುರತ್ವವಿದೆಯಾ?........... ಅಜ್ಞಾನವಿದೆಯಾ?........ ಅಧರ್ಮ ವಿದೆಯಾ? ........ ಅಹೇತುಕವಿದೆಯಾ? ....... ಏನು ನೋಡಿ ನನಗೆ ರಾವಣಾಸುರ ಎಂದು ರಾಕ್ಷಸ ಹೆಸರು ಇಟ್ಟಿದ್ದೀರ?

ಅಹರ್ನಿಶೆಗಳು ಧರ್ಮ ಚಿಂತನೆ ಪರನಾಗಿ... ಕರ್ಮಯೋಗ ಅನುಷ್ಟನಾಗಿ.... ಧರ್ಮ ಕಾರ್ಯಾಚರಣನಾಗಿ.... ವೇದಘೋಷ ವಿರೋಧಿ

ಯಾಗಿ.... ಯಜ್ಞಯಾಗಾದಿಗಳ ಬದ್ದ ಶತ್ರುವಾದ ನನ್ನನ್ನು.... ಅಸುರಾ! ರಾವಣಾಸುರಾ! ಎಂದು ಕರೆಯುವ ಈ ಮೂರ್ಖ ಮೂಢ ಮಾನವರಿಗೆ ನೀವೇ ಅಲ್ಲ ನಾನೂ ಸಹ ಬುದ್ಧಿ ಹೇಳಬೇಕಾದ್ದೆ.

ತ್ರೇತಾಯುಗದಲ್ಲಿಯೇ ನಾನು ಯಜ್ಞಗಳನ್ನು ವಿರೋಧಿಸಿದ್ದೇನೆ. ವೇದ ಪಠನಗಳನ್ನು ವಿರೋಧಿಸಿದ್ದೇನೆ. ಅವುಗಳನ್ನು ಆಚರಿಸುವವರಿಗೆ ಬಹಳ ಕಷ್ಟಗಳನ್ನು ಕೊಟ್ಟು ಮಾಡದಂತೆ ನೋಡಿದ್ದೇನೆ. ಯಜ್ಞಗಳ ವಿಷಯಗಳಲ್ಲಿಯೇ ಮೊದಲು ಚಿಕ್ಕ ಮಗುವಾದ ಶ್ರೀರಾಮನೊಂದಿಗೆ ಶತ್ರುತ್ವ ಬೆಳಸಿಕೊಂಡಿದ್ದೇನೆ. ನಾನು ಎಷ್ಟು ವಿರೋಧಿಸಿದರೂ, ಮನುಷ್ಯರು ಮಾಯಾ ಪ್ರಭಾವಿತರಾಗಿ ಯಜ್ಞಗಳಿಂದ ಹೊರಗೆ ಬರಲಾರದೆ ಹೋಗಿದ್ದಾರೆ. ಆ ದಿನದ ಆರ್ಯರಾದವರು ನನ್ನನ್ನು ದುರ್ಮಾರ್ಗನಾಗಿ, ಸ್ತ್ರೀ ಲೋಲನಾಗಿ, ಕಾಮಾಂಧದಿಂದ ಸೀತೆಯನ್ನು ಅಪಹರಿಸಿದವನಾಗಿ ಪ್ರಚಾರ ಮಾಡಿದ್ದಾರೆ. ನನ್ನ ವಯಸ್ಸು 90 ವರ್ಷಗಳಿರುವಾಗ, ನನಗೆ ಮೊಮ್ಮಗಳ ವಯಸ್ಸಿರುವ ಸೀತೆಯನ್ನು ಕೋರಿದ್ದೇ ನೆಂದು ದುಷ್ಪ್ರಚಾರ ಮಾಡಿದ್ದಾರೆ.

ದ್ವಾಪರ ಯುಗದಲ್ಲಿ ಸ್ವತಃವಾಗಿ ಭಗವಂತನೇ ಬಂದು ಯಜ್ಞಗಳು ಬಾಹ್ಯವಾಗಿ ಮಾಡುವವು ಅಲ್ಲ, ದೇಹದಲ್ಲೇ ಎರಡು ವಿಧಗಳ ಯಜ್ಞಗಳು ಇವೆಯೆಂದು ಹೇಳಿದರೂ, ಬಾಹ್ಯ ಯಜ್ಞಗಳಿಂದ ದೇವರನ್ನು ಸೇರಲಾರರೆಂದು ಹೇಳಿದರೂ, ಆತನ ಮಾತುಗಳನ್ನು ಮನುಷ್ಯರು ಲೆಕ್ಕಕ್ಕಿಡಲಿಲ್ಲ. ಸಾಕ್ಷಾತ್ತು ದೇವರಾದ ಕೃಷ್ಣನನ್ನು ಸಹ ನಿಂದಿಸಿದ್ದಾರೆ. ಈ ದಿನಕ್ಕೂ ಆತನ ಮೇಲೆ ಒಳ್ಳೆಯ ಅಭಿಪ್ರಾಯವಿಲ್ಲ. ಭಗವಂತನಾದ ಕೃಷ್ಣನನ್ನೇ ಜಾರನು, ಚೋರನು ಎಂದು ಪ್ರಚಾರ ಮಾಡುತ್ತಿದ್ದಾರೆ. ಕಲಿಯುಗದಲ್ಲಿ ಯೋಗೀಶ್ವರನಾದ ಆಚಾರ್ಯ ಪ್ರಬೋಧಾನಂದ ಯಜ್ಞಗಳಿಂದಾಗಲೀ, ವೇದ ಪಠನಗಳಿಂದಾಗಲೀ, ದಾನಗಳಿಂದಾಗಲೀ, ತಪಸ್ಸುಗಳಿಂದಾಗಲೀ ದೇವರು ತಿಳಿಯುವುದಿಲ್ಲವೆಂದು ಹೇಳುತ್ತಾ, ಗೀತೆಯನ್ನು ಆಧಾರವಾಗಿ ತೋರಿಸುತ್ತಿದ್ದರೂ, ಹಿಂದೂಗಳೆಂದು ಹೆಸರು ಇಟ್ಟುಕೊಂಡವರಿಗೇ ಇಷ್ಟವಾಗದೆ ಆತನನ್ನು ಸಹ ಕೆಟ್ಟದಾಗಿಯೇ

ಹೇಳಿಕೊಳ್ಳುತ್ತಿದ್ದಾರೆ. ತ್ರೇತಾಯುಗದಲ್ಲಿ ಬ್ರಹ್ಮ ಎಂದು ಹೆಸರುಗಳಿಸಿದ ನನ್ನನ್ನಾಗಲಿ.... ದ್ವಾಪರ ಯುಗದಲ್ಲಿ ಭಗವಂತನೆಂದು ಹೆಸರು ಬಂದಿರುವ ಕೃಷ್ಣನನ್ನಾಗಲಿ.... ಬಿಡದೆ, ಕೆಟ್ಟದಾಗಿ ಹೇಳುತ್ತಿರುವ ಮಾನವರು, ಕಲಿಯುಗದಲ್ಲಿ ಯೋಗೀಶ್ವರನೆಂದು ಹೆಸರುಪಡೆದ ಆಚಾರ್ಯ ಪ್ರಬೋಧಾನಂದನನ್ನು ಕೆಟ್ಟದಾಗಿ ಹೇಳದೇ ಬಿಡುತ್ತಾರಾ?

ಇತ್ತ ನನ್ನನ್ನು, ಅತ್ತ ಯೋಗೀಶ್ವರನನ್ನು ಮಾನವರಾಗಿ ಲೆಕ್ಕಿಸಿದರೇ ಲೆಕ್ಕಿಸಬಹುದು. ನಮ್ಮ ಮಾತುಗಳನ್ನು ಅಜ್ಞಾನವಾಗಿ ಹೋಲಿಸಿದರೆ ಹೋಲಿಸಬಹುದು, ನಮ್ಮನ್ನು ದುರ್ಮಾರ್ಗರಾಗಿ ಭಾವಿಸಿದರೇ ಭಾವಿಸಬಹುದು. ಆದರೇ ಸಾಕ್ಷಾತ್ತು ದೇವರ ಅವತಾರವಾದ ಕೃಷ್ಣನು ಹೇಳಿದ ಮಾತುಗಳನ್ನಾದರೂ ಕಲಿಯುಗದಲ್ಲಿನ ಮನುಷ್ಯರು ನಂಬಿದ್ದಾರಾ? ಕೃಷ್ಣನು ಭಗವದ್ಗೀತೆಯನ್ನು ಬೋಧಿಸುತ್ತಾ ಅದರಲ್ಲಿ ಅಕ್ಷರ ಪರಬ್ರಹ್ಮ ಯೋಗವೆನ್ನುವ ಅಧ್ಯಾಯದಲ್ಲಿ 28ನೇ ಶ್ಲೋಕದಲ್ಲಿ ಯೋಗಿಯಾದವನು **ವೇದ ಪಾರಾಯಣ ಮಾಡುವವರಿಗಿಂತ, ಯಜ್ಞಗಳು ಮಾಡುವವರಿಗಿಂತ, ದಾನಗಳು ಮಾಡುವವರಿಗಿಂತ, ತಪಸ್ಸುಗಳು ಮಾಡುವವರಿಗಿಂತ ಅಧಿಕನೆಂದು, ಅವರ ಪುಣ್ಯಗಳಿಗಿಂತ ಅಧಿಕ ಶಕ್ತಿ ಇರುವವನೆಂದು** ತಿಳಿಸಿದ್ದಾನಲ್ಲವೆ!

ವಿಶ್ವರೂಪ ಸಂದರ್ಶನ ಯೋಗದಲ್ಲಿ 48ನೇ ಶ್ಲೋಕದಲ್ಲಿ ಮತ್ತು 58ನೇ ಶ್ಲೋಕದಲ್ಲಿ **ತಪಸ್ಸುಗಳಿಂದಾಗಲೀ, ದಾನಗಳಿಂದಾಗಲೀ, ವೇದಾಧ್ಯಯನ ಗಳಿಂದಾಗಲೀ, ಯಜ್ಞಗಳಿಂದಾಗಲೀ ದೇವರನ್ನು ತಿಳಿಯುವುದಕ್ಕೆ ಸಾಧ್ಯವಿಲ್ಲವೆಂದು** ಹೇಳಿದ್ದಾನೆ ಅಲ್ಲವೆ!

ನಾವು ಹಿಂದೂಗಳೆಂದು ದೊಡ್ಡದಾಗಿ ಹೇಳಿಕೊಳ್ಳುವ ನೀವು, ಹಿಂದೂಮತದಲ್ಲಿ **ಪರಮ, ಪವಿತ್ರ, ಪರಿಶುದ್ಧ ಗ್ರಂಥವಾಗಿ ಹೆಸರು ಪಡೆದಿರುವುದು, ದೇವರೇ ಸ್ವತಃವಾಗಿ ಹೇಳಿರುವುದು ಆದ ಭಗವದ್ಗೀತೆಯನ್ನು** ನಂಬುವುದಿಲ್ಲವಾ?

ದೇವರ ಮಾತನ್ನು ಸಹ ಲೆಕ್ಕಿಸದಂತೆ ವೇದಗಳನ್ನು ಪಾರಾಯಣ ಮಾಡುವವರನ್ನು, ಯಜ್ಞಗಳನ್ನು ಮಾಡುವವರನ್ನು, ನನ್ನ ಕಾಲದಲ್ಲಿ ತೀವ್ರವಾಗಿ ಶಿಕ್ಷಿಸಿದ್ದೇನೆ. ಯಜ್ಞಗಳನ್ನು ಧ್ವಂಸ ಮಾಡಿಸಿದ್ದೇನೆ. ಆಗ ನಾನು ಮಾಡಿರುವುದು ಒಳ್ಳೆಯ ಕೆಲಸವೆಂದು ಹೇಳುವುದಕ್ಕೆ ದ್ವಾಪರ ಯುಗದಲ್ಲಿನ ಭಗವದ್ಗೀತೆ ಕೂಡಾ ಆಧಾರವಾಗಿ ಇದೆ.

ಇಂದಿಗಾದರು ನೀವು ಹೊರಗಿನ ಯಜ್ಞಗಳನ್ನು ಬಿಟ್ಟು, ದೇವರು ಹೇಳಿದ ಒಳಗಿನ ಯಜ್ಞಗಳನ್ನು ಆಚರಿಸಿರಿ. ನಿಮ್ಮ ಕರ್ಮಗಳನ್ನು ಆ ಯಜ್ಞದಲ್ಲಿ ಸುಟ್ಟುಹಾಕಿ. ನಿಮ್ಮ ಕರ್ಮನಿರ್ಮೂಲನೆಯಾದ ದಿನ, ನೀವು ದೇವರ ಹತ್ತಿರಕ್ಕೆ ಸೇರಬಹುದು. ಈ ಮಾತುಗಳನ್ನು ಲೆಕ್ಕಿಸದೆ, ನಿಮ್ಮ ಬುದ್ಧಿಗಳು ಬದಲಾಗದೆ, ಹಾಗೇ ಯಜ್ಞಗಳು ಮಾಡುತ್ತಾ ಇದ್ದರೇ ನಾನು ಪುನಃ ಭೂಮಿಮೇಲೆಗೆ ಬರಬೇಕಾಗುತ್ತದೆ. ನಿಮ್ಮ ಯಜ್ಞಗಳನ್ನು ಧ್ವಂಶ ಮಾಡಬೇಕಾಗಿ ಬರುತ್ತದೆ ಜಾಗ್ರತೆ.

**ಪಂಡಿತರು :–** ನಮ್ಮನ್ನು ಕ್ಷಮಿಸಿರಿ. ನೀವು ಇಷ್ಟು ಮಂದಿ ಬಂದು ಹೇಳುವವರೆಗು ನಾವು ಮಾಡುತ್ತಿರುವುದು ಧರ್ಮವೇ ಎಂದು ನಂಬಿದ್ದೆವು. ಈಗ ನಿಮ್ಮ ಮಾತುಗಳನ್ನು ಕೇಳಿದ ನಂತರ, ನಾವು ಇಲ್ಲಿಯವರೆಗು ಮಾಡಿರುವುದು ಅಧರ್ಮವೇ ಎಂದು ತಿಳಿಯುತ್ತಿದೆ. ಇಂದಿನಿಂದ ನಾವೂ ಸಹ ಯಜ್ಞಗಳು, ವೇದಾಧ್ಯಯನಗಳನ್ನು ಅಧರ್ಮವೆಂದು ಇತರರಿಗೆ ತಿಳಿಸುತ್ತೇವೆ.

ಇಂದಿನ ಕಾಲದಲ್ಲಿ ನಿಮ್ಮ ಹಾಗೆ ಹೇಳುತ್ತಿರುವ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರ ಮಾತುಗಳನ್ನೇ ಕೇಳುತ್ತೇವೆ. ಪ್ರೇಕ್ಷಕರಾದ ನೀವೂ ಸಹ ಈದಿನ ಯಾರೂ ಬೋಧಿಸದ ಕಣ್ಮರೆಯಾಗಿಹೋದ ಧರ್ಮಗಳನ್ನು ತಿಳಿಸುವ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರ ಜ್ಞಾನವನ್ನು ಕೇಳಿ ಪಾವನರಾಗಿರಿ....

ರಾವಣಬ್ರಹ್ಮಗೂ ... ಜೈ

ಇಂದೂ ಧರ್ಮಪ್ರಧಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ **ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರಿಗೆ ... ಜೈ**



# ಪ್ರಬೋಧಾನಂದ ನಾಟಕ

(ಪುರಾಣಗಳ ಪೂರ್ಣಯ್ಯ ಪ್ರವೇಶಿಸಿ ತನ್ನ ಕಂಕುಳದಲ್ಲಿರುವ ಭಾಗವತವನ್ನು ಕೈಯೊಳಗೆ ತೆಗೆದುಕೊಂಡು ತೆರೆದು ಕಣ್ಣಿಗೆ ಮೂರು ಬಾರಿ ಒತ್ತಿಕೊಂಡು ಅಲ್ಲೇ ಇರುವ ಕುರ್ಚಿಯಲ್ಲಿ ಕುಳಿತುಕೊಂಡು ಪಠಿಸಲು ಪ್ರಾರಂಭಿಸಿದನು.)

ಆ।ವೆ। ಕೃಷ್ಣವಾಸುದೇವಂ ಕೇಶವ ಪರಮಾತ್ಮ
ಅಪ್ರಮೇಯ ವರದ ಹರಿ ಮುಕುಂದ
ನಿಮ್ಮ ನೋಟಕಂಡೆ ನಿಮ್ಮ ಕೃಪೆ ಕಂಡುಕೊಂಡೆ
ಅಖಿಲಸೌಖ್ಯ ಪದವು ಎಸಗಿಕೊಂಡೆ

ಆ।ವೆ॥ ಅತಿ ರಹಸ್ಯವಾದ ಹರಿಜನ್ಮ ಕಥನದಲ್ಲಿ
ಮನುಜನಾರಾದರೇನು ಇಂದುನಾಳೆ
ತಾ ಭಕ್ತಿ ಯಿಂದ ಪಠಿಸಿದರೆ
ದುಃಖರಾಶಿ ಸಹಿತ ತೊಲಗುವುದು

**ಪೂರ್ಣಯ್ಯ :–** (ಮನೆಯೊಳಗೆ ವೇಣು ಪ್ರವೇಶಿಸುತ್ತಲೇ ಪೂರ್ಣಯ್ಯ ನೋಡಿ ಹೀಗೆ ಹೇಳುತ್ತಿದ್ದಾನೆ) ಎಲೈ! ವೇಣೂ ಇದೇನಾ ನೀನು ಬರುವುದು? ಮೊನ್ನೆ ಬೆಳಗ್ಗೆ ಹೋದವನು ಈಗಲಾ ಮನೆಗೆ ಬರುವುದು? ಮನೆಯಲ್ಲಿ ಕೆಲಸ, ಕಾರ್ಯ ಬಿಟ್ಟು ಜ್ಞಾನ, ಯೋಗ, ಆತ್ಮಾ, ಪರಮಾತ್ಮಾ ಎಂದುಕೊಳ್ಳುತ್ತಾ ಯಾವುದೋ ಆಶ್ರಮಕ್ಕೆ ಹೋಗುತ್ತಿದ್ದೀಯಂತೆ. ನಿಮ್ಮ ಅಪ್ಪ ಕಾಟಮಯ್ಯ ಈಗ ನಿನ್ನನ್ನು ನೋಡಿದ್ದಾನೆಂದರೇ ನಿನ್ನ ಚರ್ಮ ಸುಲಿದು ತಪ್ಪಡಿ ಬಾರಿಸುತ್ತಾನೆ, ನೀನು ಆಶ್ರಮಕ್ಕೆ ಹೋಗಿರುವುದು ನಿಜವೇನಾ.

**ವೇಣು :–** ನಿಜವೇ ತಾತ! ನಾನೊಂದು ಆಶ್ರಮವನ್ನು ಸೇರಿ ಅಲ್ಲಿರುವ ಗುರುವನ್ನು ಆಶ್ರಯಿಸಿ ಜ್ಞಾನವನ್ನು ತಿಳಿದುಕೊಳ್ಳುತ್ತಿದ್ದೇನೆ.

**ಪೂರ್ಣಯ್ಯ :–** ಲೋ ಮಂದಮತಿಯ ದಡ್ಡ! ಬಗಲಲ್ಲಿ ಕುರಿಯನ್ನು ಇಟ್ಟು ಕೊಂಡು ಮಂದೆಯೆಲ್ಲಾ ಹುಡುಕಿದ್ದಾನಂತೆ ಹಿಂದೆ ಯಾರೊ ನಿನ್ನಂತಹವನು. ಭಾರತ, ಭಾಗವತ, ರಾಮಾಯಣಗಳು, ಅಷ್ಟಾದಶ ಪುರಾಣಗಳು ತಿರುವಿಹಾಕಿ ನಿತ್ಯ ಪಠಿಸಿ ಅದರಲ್ಲಿನ ಸಾರಾಂಶವನ್ನು ಗ್ರಹಿಸಿ, ಎಲ್ಲರಿಗೂ ನಿರರ್ಗಳವಾಗಿ ಮಾತನಾಡಿ ಅರ್ಥ ಹೇಳುವ, ನಿಮ್ಮ ತಾತನನ್ನು ನಾನು ಮನೆಯಲ್ಲಿರುವಾಗ, ಜ್ಞಾನ ಜ್ಞಾನ ಎನ್ನುತ್ತಾ ಎಲ್ಲೋ ಆಶ್ರಮಗಳಿಗೆ ಹೋಗಿ ಗುರುಗಳನ್ನು ಆಶ್ರಯಿಸಬೇಕಾದ ಕರ್ಮ ಏನು ಹಿಡಿದಿದೆಯೊ ನಿನಗೆ. ನನ್ನನ್ನು ಕೇಳು ನಿನಗೆ ಯಾವ ವಿಷಯ ಬೇಕಾದರೂ ವಿವರಿಸಿ ಹೇಳುತ್ತೇನೆ. ನನಗಿಂತ ತಿಳಿದವನಾ ಆ ಗುರುವು?

## ಪದ್ಯ

**ಸೀ||** **ಪ್ರಹ್ಲಾದ ಚರಿತವು ಆಹ್ಲಾದಕರವಾಗಿ**
**ಭಕ್ತರಕುಂದೆಲ್ಪ ಭಕ್ತಿಪರುಡ**
**ವಾಮನುನವತಾರ ನ್ಯೆನಂಬು ಪ್ರಜಲಕು**
**ಭಕ್ತಮಾರ್ಕಂಡೇಯ ಭವ್ಯ ಚಾರಿತ್ರಂಬು**
**ತನಿವಿ ತೀರಗ ಜೆಪ್ಪು ಘನಡುನನು**
**ಘನ ಯಜಾಮೀಳೂನಿ ಘಟ್ಟಂಬು ಗಟ್ಟಿಗಾ**
**ಚದಿವಿ ಯರ್ಥಮು ಜೆಪ್ಪು ಚತುರಯುತುಡ**

**ತೇ||ಗಿ||** **ಅಷ್ಟಾದಶ ಪರಾಣಂಬುಲ ನಿಷ್ಟಗಾನು**
**ತರಚಿ ದೆಲ್ಪೆಡಿನಟ್ಟಿ ನೀ ತಾತನುಂಡು**
**ವೇರು ಆಶ್ರಮ ಗುರುವಿದ್ಯೆ ಗೋರೆದೇಲ**
**ಕುರ್ರಮನವಡ ಚಾಲಿಂಕ ವೆರ್ರಿಮಾನು**

**ವೇಣು :–** **ಓಹೋ ಹಾಗಾ ತಾತರವರೆ ಆದರೇ ಕೇಳು**

**ತೇ॥ಗೀ॥** **ನೀವು ಚೆಪ್ಪು ಪುರಾಣಮುಲ್ ನಿಜಮುಗಾದು**
**ಶಾಸ್ತ್ರವಿಧಿ ಗೊಪ್ಪ ದೆಪ್ಪುಡು ಸತ್ಯಮುಗನು**
**ಪುಕ್ಕಿಟಿ ಪುರಾಣಮುಲಂಡ್ರು ಬುಧುಲುವಾನಿ**
**ಮುಕ್ತಿ ತ್ರೋವನು ಜೂಪವೋ ಮುಸಲಿ ತಾತಾ**

**ಪೂರ್ಣಯ್ಯ :–** ಅಬ್ಬಾ! ಅಬ್ಬಾ! ಎಂತಹ ಮಾತು ಹೇಳಿದೆ ತುಂಟ ಮೊಮ್ಮಗನೇ! ಪುರಾಣಗಳೆಲ್ಲವೂ ಅಸತ್ಯಗಳಾ, ಶಾಸ್ತ್ರಸಮ್ಮತ ಅಲ್ಲದಿರುವವಾ! ಅಸಲು ಪುಕ್ಕಡಿ (ಬೊಗಳೆ) ಪುರಾಣಗಳಾ? ಶಿವಶಿವಾ! ಎಷ್ಟು ಅಪಚಾರ, ಎಷ್ಟು ಅಪಚಾರ. ಓ ಶ್ರೀಮನ್ನಾರಾಯಣ ಮೂರ್ತೀ! ನಿನ್ನ ವಿಲಾಸಗಳಿಗೆ ನಿಲಯವಾದ ಪುರಾಣಗಳನ್ನು ತಪ್ಪು ಹಿಡಿದ ಈ ಹುಡುಗನನ್ನು ಕ್ಷಮಿಸು. ಎಲೈ ದಡ್ಡ! ಇದೇನು ಹೋಗುವ ಸಮಯ ನಿನಗೆ, ಶ್ರೀ ವಿಷ್ಣು ಸ್ವರೂಪವಾದ ವ್ಯಾಸ ಭಗವಾನನ ವಿರಚಿತ, ಭಕ್ತ ಶಿಖಾಮಣಿಯಾದ ಬಮ್ಮೆರ ಪೋತನರವರು ರಚಿಸಿದ ಮಹಾ ಪವಿತ್ರವಾದ ಪುರಾಣವನ್ನು ದೋಷಗಳೆನಿಸಿದರೇ, ಕಾಶೀಯಲ್ಲಿ ಗೋವನ್ನು ಸಾಯಿಸಿದಷ್ಟು ಪಾಪ ಬರುತ್ತದೆ! ತಪ್ಪೆಂದು ಕೈಮುಗಿ, ಕೆನ್ನೆಗೆ ಹಾಕಿಕೋ.

**ವೇಣು :–** ಓ ನನ್ನ ತಂದೆಗೆ ತಂದೆಯವರೆ! ತಪ್ಪೆಂದು ನಾನೇ ಕೆನ್ನೆಗೆ ಹೊಡೆದುಕೊಳ್ಳಬೇಕಾ, ಅರ್ಥಾಪರ್ಥ ಇಲ್ಲದಂತೆ ಅಡ್ಡ ದಾರಿಗಳು ತೋರಿಸುವ ಕಲ್ಪಿತ ಪುರಾಣಗಳನ್ನು ನಿನ್ನೊಳಗೆ ಜೀರ್ಣಿಸುವಂತೆ ಮಾಡಿಕೊಂಡು, ತಾ ಕೆಟ್ಟ ಕೋತಿ ವನವೆಲ್ಲಾ ಕೆಡಿಸಿದಂತೆ ಜನರಿಗೆ ಬೋಧಿಸಿ, ಅವರನ್ನು ಸಹ ತಪ್ಪು ದಾರಿ ಹಿಡಿಸುತ್ತಿರುವುದು ನೀವಲ್ಲವೆ! ಆಶ್ರಮಗಳಿಗೆ ಹೋಗಿ ಅಸಲಾದ ಧರ್ಮಗಳು ತಿಳಿದುಕೊಳ್ಳುತ್ತಿರುವ ನನ್ನನ್ನೇ ತಪ್ಪೆನ್ನುತ್ತೀಯ?

**ಪೂರ್ಣಯ್ಯ :–** ತಪ್ಪೋ! ಒಪ್ಪೋ ತಲ ತಲಾಂತರಗಳಿಂದ ನಮ್ಮ ಹಿಂದೂಗಳಿಗೆ ಪೂಜ್ಯನೀಯವಾಗಿ, ಭಕ್ತಿಯಾಗಿ ಆರಾಧಿಸುವ ಪುರಾಣಗಳನ್ನು, ಯಥಾರ್ಥಕ್ಕೆ

ನಿಲ್ಲುವುದಿಲ್ಲವೆಂದು, ಕಲ್ಪಿತಗಳೆಂದು ಬಾಯಿಗೆ ಬಂದಹಾಗೆ ಮಾತನಾಡುತ್ತೀಯಾ! ಆಶ್ರಮಕ್ಕೆ ಹೋಗಿರುವ ನಿನಗೆ ನಿಮ್ಮ ಗುರುವು ಬೋಧಿಸಿದ ಜ್ಞಾನ ಇದೇನಾ? ಚೋಟುದ್ದ ಇಲ್ಲ! ನನಗೆ ಇಷ್ಟವಾಗಿ ನಿಷ್ಟೆಯಿಂದ ಪಠಿಸುವ ಪೌರಾಣಿಕ ಗ್ರಂಥವನ್ನು ನನ್ನ ಎದುರಿಗೇ ಅಲ್ಲಗಳೆಯುತ್ತೀಯ!

**ವೇಣು :–** ನನ್ನ ಮಾತಿಗೆ ಸಮಾಧಾನ ಹೇಳು, ಪುರಾಣಗಳನ್ನು ಬರೆದವರ್‍ಯಾರು ಮಾನವರೇ ಅಲ್ಲವೆ! ಮತ್ತು ಅವರಲ್ಲಿ ಜ್ಞಾನ ಎಷ್ಟು ಇದ್ದರೇ ಅವು ಅಷ್ಟೇ ಇರುತ್ತವೆ ಅಲ್ಲವೆ! ಕವಿತಾಶಕ್ತಿ ಎಷ್ಟಾದರೂ ಇದ್ದು ದೊಡ್ಡ ಕವಿಗಳು ಆಗಬಹುದು, ಆದರೇ ಅವರಲ್ಲಿ ಅಸಲಾದ ಜ್ಞಾನ ಶಕ್ತಿ ಇರಬೇಕಲ್ಲವೆ! ಯಾವ ಜ್ಞಾನ ಇಲ್ಲದಂತೆ, ಶಾಸ್ತ್ರಬದ್ಧ ಅಲ್ಲದೆ ಹೇಳಿದ ಮಾತುಗಳು ಹೇತುವಾದದಿಂದ ಖಂಡಿಸಲ್ಪಡುತ್ತವೆ. ಬೇಕೆಂದರೇ ನೀನೀಗ ಹೇಳಿದ ಪುರಾಣ ಘಟ್ಟದಿಂದ ಕೆಲವು ಆಂಶಗಳು ಯಥಾರ್ಥಕ್ಕೆ ಎಲ್ಲಿಯವರೆಗು ನಿಲ್ಲುತ್ತವೋ ಕೇಳುತ್ತೇನೆ ಹೇಳಬಲ್ಲೆಯಾ?

**ಪೂರ್ಣಯ್ಯ :–** ಓ ಸಿಡಿಲ ಮರಿ! ನನ್ನ ಅನುಭವದಲ್ಲಿ ಹತ್ತು ವರ್ಷ ಇಲ್ಲ ನಿನ್ನ ವಯಸ್ಸು. ಮರಿ ಬಂದು ಮೊಟ್ಟೆಯನ್ನು ಅಣಕಿಸಿದಂತೆ ನನ್ನನ್ನೇ ಪರೀಕ್ಷಿಸುವೆಯಾ! ನಿನ್ನವು ಕೆಲಸಕ್ಕೆ ಬಾರದ ಪ್ರಶ್ನೆಗಳಿರುತ್ತವೆ. ಆ ಆ ಆಗಲೀ. ಯಾವುವೋ ಆ ಪ್ರಶ್ನೆಗಳು ಹೊರಗೆ ಬರಲಿ

**ವೇಣು :–** ನಾನು ಕೇಳಿದ ಪ್ರಶ್ನೆಗಳಿಗೆ ನೀನು ಸರಿಯಾದ ಸಮಾಧಾನ ಹೇಳದೆ ಹೋದರೇ?

**ಪೂರ್ಣಯ್ಯ :–** ನೀನು ಕೇಳುವ ತಲೆ ಬಾಲವಿಲ್ಲದ ಪ್ರಶ್ನೆಗಳಿಗೆ ನಾನು ಸಮಾಧಾನ ಹೇಳಲಾರೆನಾ! ಎಲ್ರೈ ನನ್ನ ಹೆಸರೇನೆಂದುಕೊಳ್ಳುತ್ತಿದ್ದೀಯ ಪುರಾಣಗಳ ಪೂರ್ಣಯ್ಯ, ಸಮಸ್ತ ಪುರಾಣಗಳನ್ನು ಕುದಿಸಿ ಶೋದಿಸಿರುವವನು, ನಿನ್ನ ಸಂದೇಹಗಳನ್ನೇ ತೀರಿಸದೇ ಹೋದರೇ, ಇಗೋ ನಿತ್ಯ ಭಕ್ತಿಯಿಂದ ಪಠಿಸುವ ಈ ಪುರಾಣಗಳನ್ನು ಕೆರೆಯಲ್ಲಿ ಬಿಸಾಕಿ ಯಾರಿಗೂ ಹೇಳದಂತೆ ಪುರಾಣ ಸನ್ನ್ಯಾಸ ಮಾಡುತ್ತೇನೆ ಸರಿನಾ!

**ವೇಣು :–** ಸರಿ ಆದರೆ ನೀನು ಹೇಳಿರುವುದು ನಂಬಬೇಕೆನ್ನುತ್ತೀಯಾ?

**ಪೂರ್ಣಯ್ಯ :–** (ಭಾಗವತಂ ತಲೆಮೇಲೆ ಇಟ್ಟುಕೊಂಡು) ಈ ಭಾಗವತಂ ಸಾಕ್ಷಿಯಾಗಿ ಹೇಳುತ್ತಿದ್ದೇನೆ. ಮಾತು ತಪ್ಪಿದರೇ ಏನೆಂದಿದ್ದೀಯೋ ಮುದುಕ ಕತ್ತೆ ಎಂದು ಅನ್ನು.

**ವೇಣು :–** ಪ್ರಹ್ಲಾದ ಚರಿತ್ರೆಯಲ್ಲಿ ಒಂದು ಘಟ್ಟದಲ್ಲಿನ ಅಂಶವನ್ನು ಕೇಳುತ್ತೇನೆ ಹೇಳು. ಹಿರಣ್ಯ ಕಶಿಪನು ತನಗೆ ಸಾವು ಇಲ್ಲದೆ ವರವನ್ನು ಪಡೆಯುವುದಕ್ಕೆ ತಪಸ್ಸು ಯಾರನ್ನು ಕುರಿತು ಮಾಡಿದ್ದಾನೆ? ಎಲ್ಲಿ ಮಾಡಿದ್ದಾನೆ? ಎಷ್ಟು ವರ್ಷಗಳು ಮಾಡಿದ್ದಾನೆ.

**ಪೂರ್ಣಯ್ಯ :–** ಅಯ್ಯೋ ಇವೇನಾ ನಿನ್ನ ಸಂದೇಹಗಳು, ಹಿರಣ್ಯಕಶಿಪನು ತನಗೆ ಸಾವು ಬಾರದಂತೆ ಘೋರವಾದ ಅಡವಿಯಲ್ಲಿ, ಬ್ರಹ್ಮನನ್ನು ಕುರಿತು ಹತ್ತು ಸಾವಿರ ವರ್ಷಗಳು ತಪವನ್ನಾಚರಿಸಿದ್ದಾನೆ.

**ವೇಣು :–** ಹಿರಣ್ಯಕಶಿಪನು ಅಡವಿಗಳಲ್ಲಿ ಹತ್ತು ಸಾವಿರ ವರ್ಷಗಳು ತಪವನ್ನಾಚರಿಸಿ ಪುನಃ ಮನೆಗೆ ಸೇರುವುದರಲ್ಲಿ, ತನ್ನ ಕುಮಾರನಾದ ಪ್ರಹ್ಲಾದನು ಐದು ವರ್ಷಗಳ ಬಾಲಕನಾಗಿ ಇರುವಂತೆ ಆ ಚರಿತ್ರೆಯಲ್ಲಿ ಇದೆಯಲ್ಲವೆ! ಮತ್ತೆ ಹಿರಣ್ಯಕಶಿಪನ ಹೆಂಡತಿ ಯಾವಾಗ ಗರ್ಭವತಿಯಾದಂತೆ?

**ಪೂರ್ಣಯ್ಯ :–** ತನ್ನ ಗಂಡ ತಪಸ್ಸಿಗೆ ಹೋಗುವುದಕ್ಕಿಂತ ಮೊದಲು ಆಗಿರುತ್ತಾಳೆ.

**ವೇಣು :–** ತಪಸ್ಸಿಗೆ ಹೋಗುವುದಕ್ಕಿಂತ ಮೊದಲು ಆಗಿರುತ್ತಾಳಾ! ಹಾಗೆ ನಡೆದಿದ್ದರೇ ಹತ್ತುಸಾವಿರ ವರ್ಷಗಳು ತಪಸ್ಸು ಮಾಡಿ ತಿರುಗಿ ಬಂದ ಹಿರಣ್ಯಕಶಿಪನ ಕುಮಾರನಿಗೆ ಐದು ವರ್ಷಗಳು ಹೇಗೆ ಇರುತ್ತವೆ? ಆದರೇ ಆತನ ಹೆಂಡತಿ ಲೀಲಾವತಿ ಸಾವಿರ ವರ್ಷಗಳು ಗರ್ಭವನ್ನು ಹೊತ್ತು ಕುಮಾರನನ್ನು ಹೆತ್ತಿದ್ದಾಳೆ ಎನ್ನುತ್ತೀರ? ಹೀಗೆ ಪ್ರಪಂಚದಲ್ಲಿ ಎಲ್ಲಾದರೂ ನಡೆಯುತ್ತದಾ! ಇದು ಬಹಳ ವಿಡ್ಡೂರ ಅಲ್ಲವೆ, ಇದು ನಂಬುವಂತಹ ವಿಷಯವೇನಾ?

**ಪೂರ್ಣಯ್ಯ :–** (ಆಲೋಚಿಸಿ) ಹಾಗೆ ಹೇಗೆ ನಡೆಯುತ್ತದೆ? ಸಾವಿರ ವರ್ಷಗಳು ಸ್ತ್ರೀ ಎಲ್ಲಾದರೂ ಗರ್ಭವನ್ನು ಹೊರುತ್ತಾಳಾ, ನವಮಾಸಗಳು ಮಾತ್ರವೇ ಅಲ್ಲವೆ! ಹಾಗೆ ನಡೆದಿರುವುದಿಲ್ಲ.

**ವೇಣು :–** ಹಾಗೆ ನಡೆಯದೆ ಹೋದರೇ ಹಿರಣ್ಯಕಶಿಪನು ತಪಸ್ಸಿಗೆ ಹೋದ ನಂತರ, ಆತನ ಹೆಂಡತಿ ಗರ್ಭವನ್ನು ಧರಿಸಿ ಪ್ರಹ್ಲಾದನನ್ನು ಪ್ರಸವಿಸಿದ್ದಾಳೆ ಎನ್ನುತ್ತೀರಾ? ಹಾಗೆ ನಡೆದಿದ್ದರೇ ಪತಿವ್ರತಾ ತಿಲಕವಾದ ಲೀಲಾವತಿ ಶೀಲಕ್ಕೆ ಮಾಯದ ಮಚ್ಚೆ ಬರುತ್ತದೆ ಅಲ್ಲವೆ! ಇದಕ್ಕೆ ಪರಿಸ್ಕಾರ ಹೇಗೆ ಮಾಡಿ ಹೇಳುತ್ತೀಯೋ ಹೇಳು.

**ಪೂರ್ಣಯ್ಯ :–** (ತಲೆ ಕೆರೆದುಕೊಳ್ಳುತ್ತಾ ಆಲೋಚನೆಯಿಂದ ಅತ್ತ, ಇತ್ತ ತಿರುಗಿ) ಸರಿಯಾದ ಕೊಕ್ಕೆ ಹಾಕಿದ್ದೀಯ, ಎಷ್ಟು ಆಲೋಚಿಸಿದರೂ ಈ ಪಾಯಿಂಟಿಗೆ ಸಮಾಧಾನ ಸಿಗಲಿಲ್ಲ. ಎಲ್ಲೆ ನಾನು ಬುದ್ಧಿ ತಿಳಿದಾಗಿನಿಂದ ಪುರಾಣಗಳನ್ನು ಶೋಧಿಸುತ್ತಿದ್ದೇನೆ ಆದರೆ, ಈ ವಿಷಯವೇ ಅರ್ಥವಾಗಲಿಲ್ಲ. ಇದು ಬಹಳ ಅರ್ಥರಹಿತವಾಗಿ ಯಥಾರ್ಥ ವಿರುದ್ಧವಾಗಿ ಇದೆಯೆಂದು ಒಪ್ಪಿಕೊಳ್ಳುತ್ತಿದ್ದೇನೆ ತಂದೆ.

**ವೇಣು :–** ಒಪ್ಪಿಕೊಳ್ಳುತ್ತಿದ್ದೀಯಲ್ಲವೆ! ಇನ್ನೊಂದು ವಿಷಯವನ್ನು ಕೇಳುತ್ತೇನೆ, ಗಜೇಂದ್ರ ಮೋಕ್ಷ ಎನ್ನುವ ಘಟ್ಟದಲ್ಲಿ ಶ್ರೀಹರಿ ಆದ ವಿಷ್ಣುಮೂರ್ತಿ ಎಲ್ಲಿರುವಂತೆ ಕವಿಗಳು ವರ್ಣಿಸಿದ್ದಾರೋ ತಿಳಿಸು ತಾತ.

**ಪೂರ್ಣಯ್ಯ :–** (ಹೀನ ಸ್ವರದಿಂದ) ಹಾಗೆಯೇ ವಿವರಿಸುತ್ತೇನೆ ತಂದೆ ಕೇಳು (ಕೆಳಗಿನ ಪದ್ಯವನ್ನು ಜೋರಾಗಿ ಹೇಳುವುದಕ್ಕೆ ಪ್ರಾರಂಭಿಸಿದನು)

ಮ. **ಅಲ ವೈಕುಂಠ ಪುರಂಬುಲೋ ನಗರುಲೋ ನಾಮೂಲ ಸೌಧಂಬುದಾ**
**ಪಲಮಂದಾರವನಾಂತರಾಮೃತಸರಃ ಪ್ರಾಂತೇಂದು ಕಾಂತೋಪಲೋ**
**ತ್ಪಲಪರ್ಯಂಕ ರಮಾವಿನೋದಿ ಯಗುನಾಸನ್ನ ಪ್ರಸನ್ನುಂಡು ವಿ**
**ಹ್ವಲ ನಾಗೇಂದ್ರಮು ಪಾಹಿ ಪಾಹಿ ಯನ ಗುಯ್ಯಾಲಿಂಚಿ ಸಂರಂಭಿಯೈ.**

**ವೇಣು :–** ಏನೂ ವೈಕುಂಟವೆಂಬ ಪುರದಲ್ಲಿ, ಒಂದು ಬೀಧಿಯಲ್ಲಿ, ಒಂದು ಮೂಲೆಯಲ್ಲಿರುವ ಮಹಡಿಯಲ್ಲಿ, ಶೇಷ ಶಯನದ ಮೇಲೆ, ಲಕ್ಷ್ಮೀದೇವಿ ಯೊಂದಿಗೆ ವಿನೋದಗಳಾಡುತ್ತಾ, ಸಂತೋಷವಾಗಿ ಇದ್ದಾನೆಂದೇ ಅಲ್ಲವೆ ಆ ಪದ್ಯದಲ್ಲಿನ ಅರ್ಥ. ಸರಿ ಮತ್ತೆ ಪ್ರಹ್ಲಾದ ಚರಿತ್ರೆಯಲ್ಲಿ ಹಿರಣ್ಯಕಶಿಪನು ತನ್ನ ಕುಮಾರನನ್ನು ನಿನ್ನ ಶ್ರೀಹರಿ ಎಲ್ಲಿದ್ದಾನೆಂದು ಕೇಳಿದಾಗ

**ಕಂ॥ ಯಿಂದುಗಲ ಡಂದುಲೇಡನಿ**
**ಸಂದೇಹಮು ವಲದು ಚಕ್ರಿ ಸರ್ವೋಪಗತುಂ**
**ಡೆಂದೆಂದು ವೆದಕಿ ಚೂಚಿನ**
**ಅಂದಂದೇ ಗಲಡು ದಾನವಾಗ್ರಣಿ ವಿಂಟೇ**

ಎಂದು ವರ್ಣಿಸಿದ್ದಾನೆ, ಈ ಎರಡು ವಿಧಾನಗಳಲ್ಲಿಯೂ ಯಾವುದನ್ನು ನಂಬು ಎನ್ನುತ್ತೀಯ? ಒಂದು ಕಡೆ ವೈಕುಂಠಪುರದಲ್ಲಿ ಇದ್ದಾನೆಂದು, ಒಂದು ಕಡೆ ಎಲ್ಲಿ ನೋಡಿದರೂ ಇದ್ದಾನೆಂದು ತಿಳಿಸುವ ಈ ಪುರಾಣಕವಿಗಳ ಯಾವ ಮಾತು ನಿಜವಾದುದು ಎನ್ನುತ್ತೀರ ತಾತ?

**ಪೂರ್ಣಯ್ಯ :–** ಲೋ ನಿನ್ನ ತಲೆ ಸಿಡಿಯ! ಪಕ್ಷಿ ಚಿಕ್ಕದು ಕೂಗು ದೊಡ್ಡದು ಎನ್ನುವಂತೆ ಎಂತಹ ಕಗ್ಗಂಟು ವಿಷಯುಗಳನ್ನು ಆಯ್ಕೆವಾಡಿಟ್ಟು ಕೊಂಡಿದ್ದೀಯಲ್ಲೋ. ಇದೂ ಸಹ ನೀನು ಹೇಳಿದಂತೆ ವಾಸ್ತವಕ್ಕೆ ದೂರವಾಗಿ ದ್ವಂದ್ವ ವೈಖರಿಯಲ್ಲಿ ಇದೆ. ಆಲೋಚಿಸಿ ನೋಡಿದಾಗ ಪುರಾಣಗಳಲ್ಲಿ ಅಲ್ಲಲ್ಲಿ ಇಂತಹ ಅಸತ್ಯ ವಿಷಯಗಳಿರುವಂತೆ ನನಗೆ ಈಗೀಗ ತಿಳಿಯುತ್ತಿದೆ.

**ವೇಣು :–** ಆಗಲೇ ಏನಾಗಿದೆ ತಾತ! ಮುಂದೆ ಇದೆ ಮುದುಕರ ಹಬ್ಬ, ಇನ್ನೊಂದು ಪಾಯಿಂಟ್ ಕೇಳುತ್ತೇನೆ ಹೇಳಿರಿ. ವಾಮನ ಪುರಾಣದಲ್ಲಿ ವಾಮನನು ಬಲಿಚಕ್ರವರ್ತಿಯನ್ನು ಮೂರಡಿ ಭೂಮಿಯನ್ನು ದಾನವಾಗಿ ಯಾಚಿಸಿದ್ದಾನೆ ಆತನು ಕೊಟ್ಟಿದ್ದಾನೆ. ಮತ್ತೆ ವಾಮನ ಮೂರ್ತಿ, ಆ ಧಾನ ಕೊಟ್ಟಿರುವ ಭೂಮಿಯನ್ನು ಹೇಗೆ ತೆಗೆದುಕೊಂಡಿದ್ದಾನೋ ವಿವರಿಸಿರಿ!

**ಪೂರ್ಣಯ್ಯ :–** ಏನಿದೆ ತಂದೆ? ಆ ವಾಮನ ಆಕಾಶಕ್ಕೆ ಬೆಳೆದು ಒಂದು ಪಾದದಿಂದ ಭೂಗೋಳವನ್ನೆಲ್ಲಾ ಆಕ್ರಮಿಸಿಕೊಂಡಿದ್ದಾನೆ. ಎರಡನೆ ಪಾದ ಅಂಬರ ಬೀದಿಯೆಲ್ಲವನ್ನು ಆಕ್ರಮಿಸಿಕೊಂಡಿದ್ದಾನೆ.

**ವೇಣು :–** ಮೂರನೆ ಪಾದದಿಂದಿ ಏನು ಆಕ್ರಮಿಸಿಕೊಂಡಿದ್ದಾನೆ.

**ಪೂರ್ಣಯ್ಯ :–** ಅದೇ ಹೇಳುತ್ತಿದ್ದೇನೆ ಕೇಳು ತಂದೆ! ಮೂರನೆ ಪಾದವನ್ನು ಇಡಲು ಅಳತೆ ಮಾಡುವುದಕ್ಕೆ ಏನೂ ಇಲ್ಲದಿರುವುದರಿಂದ, ಆ ವಿಷಯ ಬಲಿಚಕ್ರವರ್ತಿಯನ್ನು ಕೇಳಿದರೇ ನನ್ನ ತಲೆ ಮೇಲೆ ಇಡು ಎಂದನಂತೆ, ಹಾಗೆಯೇ ಮಾಡಿ ಆತನನ್ನು ಪಾತಾಳಕ್ಕೆ ತುಳಿದಿದ್ದಾನಂತೆ.

**ವೇಣು :–** ಆ! ನಿಲ್ಲು ತಾತ ನಿಲ್ಲು. ಒಂದನೆ ಪಾದದಿಂದಿ ಭೂಮಿಯನ್ನೆಲ್ಲಾ ಆವರಿಸಿಕೊಂಡಾಗ ಬಲಿ ಚಕ್ರವರ್ತಿಕೂಡಾ ಆ ಪಾದದ ಕೆಳಗೇ ಇದ್ದನಲ್ಲ. ಮೂರನೆ ಪಾದ ಏನು ತೆಗೆದುಕೊಂಡಿದ್ದಾನೋ ಹೇಳಿರಿ.

**ಪೂರ್ಣಯ್ಯ :–** ಹೇಳುವುದಕ್ಕೆ ಏನಿದೆ? ನನ್ನ ಪಿಂಡ! ಬಹಳ ಇಕ್ಕಟ್ಟು ಪ್ರಶ್ನೆಗಳನ್ನು ಕೇಳಿ ಬೇಸರ ತರಿಸುತ್ತಿದ್ದೀಯ.

**ವೇಣು :–** ಚೆನ್ನಾಗಿ ಆಲೋಚಿಸಿರಿ ತಾತ. ಮೋಕ್ಷ ಬೇಕೆಂದುಕೊಳ್ಳುವವರು ಶಾಸ್ತ್ರಬದ್ಧವಾದ ಧರ್ಮಗಳು ತಿಳಿದುಕೊಳ್ಳಬೇಕು, ಆದರೆ ಶಾಸ್ತ್ರ ಸಮ್ಮತವಲ್ಲದ ಪುಕ್ಕಟೆ (ಬೊಗಳೆ) ಪುರಾಣಗಳನ್ನು ಹಿಡಿದುಕೊಂಡು ಪರದಾಡಿದರೆ ಕೊನೆಗೆ ಉಳಿಯುವುದು ಸಮಸ್ಯೆಗಳೇ. ಪುರಾಣಗಳು ಕೇವಲ ಕಾಲಕ್ಷೇಪಕ್ಕೆ ಕೆಲಸಕ್ಕೆ ಬರುತ್ತವೆ, ಆದರೆ ಕರ್ಮ ಸುಡುವುದಕ್ಕೆ ಉಪಯೋಗಿಸುವ ಜ್ಞಾನ ಇರುವುದಿಲ್ಲ.

**ಪೂರ್ಣಯ್ಯ :–** (ತಲೆ ಅಲ್ಲಾಡಿಸಿ) ನಿಜವೇ ತಂದೆ ನಿಜವೇ! ಚಿಕ್ಕವನಾದರೂ ನನ್ನ ಕಣ್ಣು ತೆರೆಸಿದ್ದೀಯ. ನನಗೆ ಈಗ ಬುದ್ಧಿ ಬಂದಿದೆ, ಚೆನ್ನಾಗಿ ಅರ್ಥ ವಾಗುತ್ತಿದೆ. ನೀನೇ ಅಂತಹ ಪ್ರಶ್ನೆಗಳೊಂದಿಗೆ ಪುರಾಣಗಳಲ್ಲಿನ ಬಂಡಾರಗಳನ್ನೆಲ್ಲ ಹೊರಗೆ ಎಳೆಯದೇ ಹೋಗಿದ್ದರೆ, ಉಳಿದ ನನ್ನ ಜೀವಿತ ಕಾಲ ಅವುಗಳೊಂದಿಗೇ

ವ್ಯರ್ಥ ಮಾಡಿಕೊಳ್ಳುತ್ತಿದ್ದೆನು, ಅಸಲು ನಿನಗೆ ಇಂತಹ ಪಾಯಿಂಟ್‌ಗಳನ್ನು ತಿಳಿಸಿದ ಮಹಾನುಭಾವ ಯಾರು?

**ವೇಣು :–** ಇನ್ಯಾರು ನಮ್ಮ ಗುರುಗಳೇ.

**ಪೂರ್ಣಯ್ಯ :–** ಆಹಾ! ಆತನು ನಿಜವಾಗಿ ಭಗವತ್ ಸ್ವರೂಪನೇ, ಇಲ್ಲದಿದ್ದರೇ ಎಷ್ಟೋ ತಾರ್ಕಿಕ ಜ್ಞಾನದಿಂದ ಇಲ್ಲಿಯವರೆಗು ಯಾರೂ ವಿಮರ್ಶಿಸದ ಪುರಾಣಗಳನ್ನು, ಶಾಸ್ತ್ರ ಸಮ್ಮತವಾಗಿ ವಿಮರ್ಶಿಸಿ, ಅದರಲ್ಲಿರುವ ಅಸಹಜವಾದ ಕವಿತಾಶೈಲಿಯನ್ನು ಎಲ್ಲರಿಗೂ ತಿಳಿಯುವಂತೆ ಮಾಡಿದ್ದಾನೆ. ಆತನ ಹೆಸರೇನು? ಆತನ ಆಶ್ರಮ ನಾಮವೇನೋ ತಿಳಿಸು ತಂದೆ! ನಾನೂ ಸಹ ಆತನನ್ನು ದರ್ಶಿಸಿ ಕೃತಾರ್ಥನಾಗುತ್ತೇನೆ ಇಂತಹ ದೊಡ್ಡ ವಿಜ್ಞಾನಿಯಾದ ಗುರುವನ್ನು ನೀನು ಸೇವಿಸುತ್ತಿರುವುದಕ್ಕೆ ನಿನ್ನ ಜೀವನ ಧನ್ಯವಾಗಿದೆ. ನನಗೂ ಸಹ ಈಗ ಮೋಕ್ಷ ಪ್ರಾಪ್ತಿಗೆ ಉಪಕರಿಸುವ ಜ್ಞಾನ ತಿಳಿದುಕೊಳ್ಳಬೇಕೆನಿಸುತ್ತಿದೆ. ಆದರೆ

**ತೇ॥ಗೀ॥** **ಪರಮಪದಮುನು ಜೇರ್ಪಂಗ ತರಮುಗಾನಿ**
**ಪುಕ್ಕಿಟಿ ಪುರಾಣಮುಲ ನಮ್ಮಿ ನಿಕ್ಕಮುಗನು**
**ಕಾಲಮಂತಯು ರಿತ್ತಗಾ ಗಡಿಪಿತೇನು**
**ಸತ್ಯಧರ್ಮಂಬು ಲೆರಿಗಿಂಚು ಶಾಸ್ತ್ರಮೇದಿ**

**ವೇಣು :–** ತಾತ ನಿಜವಾದ ಯೋಗ ವಿಧಾನಗಳು ತಿಳಿಸುವ ಗ್ರಂಥ ಬೇಕೆಂದರೆ ಕೇಳು.

ಪದ್ಯ : **ಕಂ॥** **ನಿಕ್ಕಮಗು ಧರ್ಮ ಮಾರ್ಗಮು**
**ಚಕ್ಕಗ ನೆರಿಗಿಂಚುನಟ್ಟಿ ಸತ್ ಶಾಸ್ತ್ರಂಬುನ್**
**ಯೆಕ್ಕಡೋ ವೆದಕಗ ನೇಲನು**
**ಮಕ್ಕುವಗನು ಗೀತೆಯೊಕಟೆ ಮಹಿಲೋ ತಾತಾ**

**ಪೂರ್ಣಯ್ಯ :–** ಏನು ತಂದೆ ಭಗವದ್ಗೀತೆಯಾ! ಅದೂ ಸಹ ಪುರಾಣಾಂತರ್ಗತವಾದ ಗ್ರಂಥವೇ ಅಲ್ಲವೆ?

**ವೇಣು :–** ಯಾವ ಪುರಾಣದಲ್ಲಿ ಇದೆಯೆನ್ನುತ್ತೀರಾ.

**ಪೂರ್ಣಯ್ಯ :–** ಮಹಾಭಾರತದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಬೋಧಿಸಿರುವುದೇ ಅಲ್ಲವೆ!

**ವೇಣು :–** ಆ! ಅಲ್ಲೇ ನೀವು ತಪ್ಪಿನಲ್ಲಿ ಕಾಲುಹಾಕುತ್ತಿದ್ದೀರ. ಭಾರತ, ರಾಮಾಯಣಗಳು ಪುರಾಣಗಳೊಳಗೆ ಸೇರುವುದಿಲ್ಲ. ಅವು ಒಂದು ಇತಿಹಾಸ ಗಾಥೆಗಳು. ಪುರಾಣಗಳು ಬೇರೆ, ಇತಿಹಾಸ ಗಾಥೆಗಳು ಬೇರೆ, ಶಾಸ್ತ್ರಗಳು ಬೇರೆ.

**ಪೂರ್ಣಯ್ಯ :–** ನಾನು ಅಷ್ಟು ಆಳವಾಗಿ ಆಲೋಚಿಸಲಿಲ್ಲ, ಇನ್ನು ಇಂದಿನಿಂದ ಪುರಾಣಗಳನ್ನು ಬಿಟ್ಟು, ನೀನು ಹೇಳಿದಂತೆ ಭಗವದ್ಗೀತೆಯನ್ನು ಭಕ್ತಿಯಾಗಿ ಪಠಿಸಿ ಪರಮಾರ್ಥ ತತ್ತ್ವವನ್ನು ಗ್ರಹಿಸಿ ಪರಂಧಾಮಕ್ಕೆ ಹತ್ತಿರವಾಗುತ್ತೇನೆ. ನಿನಗೆ ಹೇಳಿದ ಮಾತಿನ ಪ್ರಕಾರ ಈ ಪುರಾಣ ಪುಸ್ತಕಗಳನ್ನು ಮೂಟೆ ಕಟ್ಟಿ ಗಂಗೆಯಲ್ಲಿ ಬಿಸಾಡುತ್ತೇನೆ. (ಎಂದು ಭಾಗವತವನ್ನು ಕೈಯೊಳಗೆ ತೆಗೆದುಕೊಂಡು) ಓ ಪುರಾಣ ಪುಸ್ತಕಗಳೇ! ನನಗೆ ಬುದ್ಧಿ ತಿಳಿದಾಗಿನಿಂದ ನಿಮ್ಮನ್ನೇ ಪಠಿಸಿ ಆರಾಧಿಸಿದ್ದೇನೆ. ನಿಮ್ಮಿಂದ ಯಾವ ಉಪಯೋಗ ಇಲ್ಲವೆಂದು ಈದಿನವೇ ತಿಳಿದುಕೊಂಡಿದ್ದೇನೆ. ಇನ್ನು ಇಂದಿನಿಂದ ನಿಮಗೂ, ನನಗೂ ಋಣ ತಿರಿಹೋಯಿತು (ಎಂದು ಭಾಗವತವನ್ನು ತನ್ನ ಭುಜದ ಮೇಲಿರುವ ಟವಲ್‌ನಲ್ಲಿ ಮೂಟೆಕಟ್ಟಿಕೊಂಡು ತಲೆಯಮೇಲೆ ಇಟ್ಟುಕೊಂಡು ಹೋಗುತ್ತಿರುವಾಗ)

**ವೇಣು :–** (ಪೂರ್ಣಯ್ಯ ಕೈ ಹಿಡಿದುಕೊಂಡು) ತಾತ ನಿಲ್ಲಿರಿ! ನೀವಷ್ಟು ಬಾಧೆಯಾಗಿ ಪುರಾಣ ಪುಸ್ತಕಗಳನ್ನು ಗಂಗೆಯಲ್ಲಿ ಬಿಸಾಡಬೇಕಾದ ಅವಶ್ಯವಿಲ್ಲ. ಏನೂ ತಿಳಿಯದೆ ಮೂಢತ್ವದಲ್ಲಿದ್ದ ಅಜ್ಞಾನ ಮಾನವರನ್ನು ಭಕ್ತಿ ಮಾರ್ಗದೊಳಗೆ ಮರಳಿಸುವುದಕ್ಕೆ ಈ ಪುರಾಣಗಳು ಸ್ವಲ್ಪಮಟ್ಟಿಗೆ ಉಪಕರಿಸುತ್ತವೆ. ಆದ್ದರಿಂದ ಅವುಗಳನ್ನು ಹಾಗೆ ಇಟ್ಟುಕೊಳ್ಳಿ.

**ಪೂರ್ಣಯ್ಯ :–** ಅಬ್ಬಾ ಬದುಕಿಸಿದ್ದೀಯ ತಂದೆ, ಎಷ್ಟೋ ವರ್ಷಗಳಿಂದ ಕಷ್ಟಪಟ್ಟು ಸಾಧಿಸಿಕೊಂಡ ಪುರಾಣ ವಿದ್ಯೆ ಪೂರ್ತಿಯಾಗಿ ಕೆಲಸಕ್ಕೆ ಬಾರದಂತೆ ಹೋಗಿದೆ ಎನ್ನುವ ಬಾಧೆಯನ್ನು ಕಡಿಮೆ ಮಾಡಿದ್ದೀಯ.

**ವೇಣು :–** ತಾತ ಇನ್ಮುಂದೆಯಾದರೂ ಭಗವದ್ಗೀತೆಯನ್ನು ಭಕ್ತಿಯಿಂದ ಪಠಿಸಿ, ಅದರಲ್ಲಿನ ಸಾರಾಂಶವನ್ನು ಗ್ರಹಿಸುವುದಕ್ಕೆ ಪ್ರಯತ್ನಿಸು ಫಲಿತವಿರುತ್ತದೆ. ಅದರಲ್ಲಿ ನಿನಗೇನಾದರೂ ಅರ್ಥವಾಗದ ವಿಷಯಗಳಿದ್ದರೇ ನನ್ನನ್ನು ಕೇಳಿದರೇ ನಮ್ಮ ಗುರುವಿನಿಂದ ತಿಳಿದುಕೊಂಡು ನಾನು ನಿನಗೆ ತಿಳಿಸುತ್ತೇನೆ.

**ಪೂರ್ಣಯ್ಯ :–** ತಂದೆ! ವೇಣೂ ಅಜ್ಞಾನವೆನ್ನುವ ಅಂಧಕಾರದಲ್ಲಿ ಇರುವವರಿಗೆ ಜ್ಞಾನ ಬೆಳಕನ್ನು ಹರಿಯುವಂತೆ ಮಾಡುವ ಮಹಾ ಧರ್ಮಗಳನ್ನು ಪ್ರಬೋಧ ಮಾಡಿ ಆನಂದವನ್ನು ಉಂಟುಮಾಡುವ ನಿಮ್ಮ ಸದ್ಗುರುವಿನ ನಾಮಧೇಯವೇನು?

**ವೇಣು :–** ತಾತ ನೀನು ಈಗ ಹೇಳಿದ ವಾಕ್ಯದಲ್ಲೇ ನಮ್ಮ ಗುರುವಿನ ಹೆಸರಿದೆ. ಅದು ನಿನಗೆ ಅರ್ಥವಾಗದಿದ್ದರೇ ಸಮಯ ಬಂದಾಗ ತಪ್ಪದೆ ಹೇಳುತ್ತೇನೆ. ಅಗೋ ಅಣ್ಣ ಚಂದ್ರ ಇಲ್ಲಿಗೇ ಬರುತ್ತಿದ್ದಾನೆ.

**ಚಂದ್ರ :–** (ಅಷ್ಟರಲ್ಲಿ ವೇಣು ಅಣ್ಣ ಚಂದ್ರ ಪ್ರವೇಶಿಸಿ) ಏನೋ ವೇಣೂ ತಾತ ಮೊಮ್ಮಗ ತತ್ತ್ವಾಯಣದಲ್ಲಿ ಮುಳುಗಿದಂತಿದ್ದೀರ.

**ಪೂರ್ಣಯ್ಯ :–** ಹೌದು! ಚಂದ್ರ. ಈ ವೇಣು ಈ ದಿನ ನನಗೆ ಒಳ್ಳೆಯ ಉಪಕಾರ ಮಾಡಿದ್ದಾನೆ! ಅಸತ್ಯಮಾರ್ಗದಲ್ಲಿ ಪಯಣಿಸುತ್ತಿರುವ ನನ್ನನ್ನು ಸತ್ಯ ಮಾರ್ಗಕ್ಕೆ ಮರಳಿಸಿದ್ದಾನೆ.

**ವೇಣು :–** ಹೌದಣ್ಣಾ! ತಾತನನ್ನು ಪುರಾಣಗಳ ಪ್ರಭಾವದಿಂದ ತಪ್ಪಿಸಿ ಧರ್ಮಶಾಸ್ತ್ರಗಳ ಕಡೆ ತಿರುಗಿಸಿರುವುದಕ್ಕೆ ಸಂತೋಷಿಸುತ್ತಿದ್ದೇನೆ.

**ಚಂದ್ರ :–** ವಾಟ್! ಧರ್ಮಶಾಸ್ತ್ರವಾ! ಅದು ಮಾನವರಿಗೆ ಏಕೆ ಉಪಯೋಗ ವಾಗುತ್ತದೆ?

**ವೇಣು :–** ಯಾಕಣ್ಣಾ! ದೇವರನ್ನು ತಿಳಿದುಕೊಳ್ಳುವುದಕ್ಕೆ, ಆತನಲ್ಲಿ ಐಕ್ಯ ವಾಗುವುದಕ್ಕೆ.

**ಚಂದ್ರ :–** ನಾನ್‌ಸೆನ್ಸ್ ದೇವರು ದೇವರು ದೇವರು, ಎಲ್ಲಿದ್ದಾನೆ ದೇವರು, ಮಾನವನ ಮೇಧಸ್ಸು ಮಹೋನ್ನತವಾಗಿ ಬೆಳೆದುಹೋಗಿದೆ ಬ್ರದರ್, ಆಕಾಶದಲ್ಲಿ ರಯ್ ಎಂದು ವೇಗವಾಗಿ ಹೋಗುವ ರಾಕೆಟ್‌ಗಳನ್ನು ತಯಾರಿಸಿ, ಚಂದ್ರಲೋಕ ದಲ್ಲಿ ಹೆಜ್ಜೆ ಇಟ್ಟಿದ್ದಾನೆ ಮಾನವನು, ಸಬ್‌ಮೆರೈನ್‌ಗಳು ತಯಾರಿಸಿ ಸಮುದ್ರ ಅಂತರ್ಭಾಗದಲ್ಲಿ ಸುರಕ್ಷಿತವಾಗಿ ಪ್ರಯಾಣ ಮಾಡುತ್ತಿದ್ದಾನೆ. ರೋಬೋಗಳನ್ನು ಸೃಷ್ಠಿಸಿ ಮಾನವನು ಸುನಾಯಾಸವಾಗಿ ಮಹಾಮಹಾ ಕಾರ್ಯಗಳು ಮಾಡುತ್ತಿದ್ದಾನೆ. ಮಾನವನು ಹೈಡ್ರೋಜನ್ ಅಣುಬಾಂಬ್‌ಳಂತಹ ಮಹಾ ಮಾರಣಾಯುಧಗಳನ್ನು ಸೃಷ್ಠಿಸಿ ಸೃಷ್ಠಿಯನ್ನೇ ಅರ್ಧ ನಿಮಿಷದಲ್ಲಿ ಅಂತ್ಯ ಮಾಡುವಂತಹ ಅನಂತ ಶಕ್ತಿಯನ್ನು ಸಂಪಾದಿಸಿಕೊಂಡಿದ್ದಾನೆ. ಮಾನವನು ಗುಂಡಿಗೆಗೆ ಬದಲು ಗುಂಡಿಗೆಯನ್ನು, ಕಣ್ಣಿಗೆ ಬದಲು ಕಣ್ಣನ್ನು ಹಾಕುತ್ತಿದ್ದಾನೆ. ಮಾನವನು ಇವೆಲ್ಲಾ ಹೇಗೆ ಮಾಡುತ್ತಿದ್ದಾನೆ? ಅದೇ ಸೈನ್ಸ್ ಸೈನ್ಸ್ ಯುಗ ಬ್ರದರ್! ಇದು. ಈಗ ಕೂಡಾ ದೇವರು, ದೆವ್ವಗಳು, ಸಾಧುಗಳು, ಸನ್ಯಾಸಿಗಳು ಎನ್ನುವ ಭ್ರಾಂತಿಯಿಂದಿರುವ ನಿಮ್ಮಂತಹ ಹುಚ್ಚರನ್ನು ಏನನ್ನಬೇಕೋ ತಿಳಿಯದಂತಿದೆ.

**ವೇಣು :–** ಅರೇ ಅಣ್ಣಾ! ಸೈನ್ಸ್ ಎಂದು ಚೀರುತ್ತಾ ನಿನ್ನ ಸೈಂಟಿಸ್ಟ್ ಬುದ್ಧಿ ತೋರಿಸಿದ್ದೀಯ. ಕೊನೆಗೆ ನಿಮ್ಮ ಸೈನ್ಸ್ ಏನು ಸಾಧಿಸುತ್ತಿದೆಯೋ ತಿಳಿದಿದೆಯಾ, ಪ್ರಪಂಚವನ್ನು ಯಾವುದೋ ಒಂದು ದಿನ ಉಪದ್ರವದಲ್ಲಿ ಮುಳುಗಿಸುತ್ತದೆ. ಪ್ರಪಂಚ ಶಾಂತಿ ಎಂದಿಗೂ ಕಲ್ಪಿಸುವುದಿಲ್ಲ. ಆದರೂ ನಿಮ್ಮ ಸೈಂಟಿಸ್ಟರು, ಡಾಕ್ಟರ್‌ಗಳು ಎಲ್ಲಾ ಕಣ್ಣಿಗೆ ಕಾಣಿಸುವವುಗಳನ್ನು ಶೋಧಿಸಿ ಸಾಧಿಸಬಲ್ಲರು. ಆದರೆ ಕಣ್ಣಿಗೆ ಕಾಣಿಸದ ತತ್ತ್ವ ರಹಸ್ಯಗಳು ನಿಮಗೆ ಹೇಗೆ ತಿಳಿಯುತ್ತವೆ?

**ಚಂದ್ರ :–** ಕಣ್ಣಿಗೆ ಕಾಣಿಸದ ತತ್ತ್ವಗಳಾ ಏನವು, ಎಲ್ಲಿವೆ?

**ವೇಣು :–** ಅವು ನಮ್ಮ ಶರೀರದಲ್ಲೇ ಇವೆ. ಜೀವಿಯು, ಮನಸ್ಸು, ಬುದ್ಧಿ, ಚಿತ್ತ, ಅಹಂ ಇವೇ ಅಲ್ಲದೆ ಅನೇಕ ಗುಣಗಳು ಬಾಹ್ಯ ನೇತ್ರಗಳಿಗೆ ಯಾವ ಮಾತ್ರ ಕಾಣಿಸುವುದಿಲ್ಲ. ಕಣ್ಣನ್ನು ತೆಗೆದು ಕಣ್ಣನ್ನು, ಗುಂಡಿಗೆಯನ್ನು ತೆಗೆದು ಗುಂಡಿಗೆಯನ್ನು ಹಾಕುವ ಡಾಕ್ಟರ್‌ಗಳು ಶರೀರದಲ್ಲಿನ ಜೀವಿಯನ್ನು ತೆಗೆದು ಬೇರೆ ಜೀವಿಯನ್ನು ಯಾಕೆ ಹಾಕಲಾರದಂತಿದ್ದಾರೆ. ಮರಣ ಸಮಯದಲ್ಲಿ ಜೀವಿಯು ಕಣ್ಣಿಗೆ ಕಾಣಿಸದಂತೆ ಹೇಗೆ ಹೋಗುತ್ತಿದ್ದಾನೋ ಕಂಡುಹಿಡಿ ಯುತ್ತಿದ್ದೀರ? ಹುಟ್ಟಿದ ಶಿಶು ಶರೀರದೊಳಗೆ ಜೀವಿಯು ಹೇಗೆ ಪ್ರವೇಶಿ ಸುತ್ತಿದ್ದಾನೋ ನೋಡುತ್ತಿದ್ದೀರ? ಹಸಿವು ನೀರಡಿಕೆಗಳನ್ನು ಜಯಿಸುತ್ತಿದ್ದೀರಾ? ಆಸೆಯನ್ನು ಹತೋಟಿಯಲ್ಲಿಡುತ್ತಿದ್ದೀರಾ?

**ಚಂದ್ರ :–** ಅರೇ ಬ್ರದರ್! ನೀನು ಬಹಳ ದೊಡ್ಡವನಾಗುತ್ತಿದ್ದೀಯ ಅಷ್ಟಕ್ಕೂ ನೀನು ಹೇಳುವ ದೇವರು, ದೇವಾದಿ ದೇವರು ಇದ್ದಾರೆನ್ನುತ್ತೀಯಾ, ಇದ್ದರೆ ಎಲ್ಲಿದ್ದಾನೆ? ಹೇಗೆ ಇದ್ದಾನೋ ಹೇಳು ನೋಡೋಣ?

**ವೇಣು :–** ಭೂಮಿ ತನ್ನ ಸುತ್ತಲೂ ತಾನು ತಿರುಗುತ್ತಾ ಸೂರ್ಯನ ಸುತ್ತಲೂ ತಿರುಗುತ್ತಿದೆ. ಅದು ಯಾವ ಶಕ್ತಿ ಆಧಾರದಿಂದ ಹಾಗೆ ತಿರುಗುತ್ತಿದೆ? ಸೂರ್ಯನು ಚಂದ್ರನು ಅನೇಕ ಗ್ರಹಗಳು, ನಕ್ಷತ್ರಗಳು ಶೂನ್ಯದಲ್ಲಿ ನೇತಾಡುತ್ತಿವೆ. ಅವು ಯಾವ ಶಕ್ತಿ ಆಧಾರದಿಂದ ನಿಂತಿವೆ? ಸಮುದ್ರ ಜಲಗಳು ಮೇರೆ ತಪ್ಪದಂತೆ ಇವೆ. ಯಾವ ಶಕ್ತಿ ಆಧಾರದಿಂದ ಇವೆ? ಗಾಳಿ ಕ್ರಮಬದ್ಧವಾಗಿ ಬೀಸುತ್ತಿದೆ. ಹಾಗೆ ಯಾವ ಶಕ್ತಿಯಿಂದ ನಡೆಯುತ್ತಿದೆ?

**ಚಂದ್ರಂ :–** ಡಿಯರ್ ಬ್ರದರ್! ಬಹಳ ಮುಖ್ಯವಾದ ಪ್ರಶ್ನೆಯನ್ನು ಕೇಳಿದ್ದೀಯ, ನೀನು ಈಗ ಹೇಳಿದವುಗಳನ್ನೆಲ್ಲಾ ಕಂಟ್ರೋಲಿಂಗ್ ಮಾಡುವ ಶಕ್ತಿ ಒಂದು ಇದೆ. ಅದನ್ನೇ ಮಾಗ್ನೆಟ್ ಪವರ್ ಎನ್ನುತ್ತಾರೆ. ಈ ವಿಶಾಲ ವಿಶ್ವವೆಲ್ಲಾ ಅದಕ್ಕೆ ಒಳಪಟ್ಟಿರುತ್ತದೆ. ಅದನ್ನು ಕನ್ನಡದಲ್ಲಿ ಗುರುತ್ವಾಕರ್ಷಣೆ ಶಕ್ತಿ ಎನ್ನುತ್ತಾರೆ. ಈ

ಶಕ್ತಿ ಕಣ್ಣಿಗೆ ಕಾಣಿಸದಂತಿದ್ದರೂ ಈ ಸೃಷ್ಠಿಯನ್ನೆಲ್ಲಾ ಕಂಟ್ರೋಲ್ ಮಾಡುತ್ತಾ ಇರುತ್ತದೆ.

**ವೇಣು :–** ಆ! ಅದೇ ಶಕ್ತಿಯನ್ನೇ ನಾವು ಪರಮಾತ್ಮಯೆಂದು ದೇವಾದಿದೇವ ರೆಂದು ಅನ್ನುತ್ತಿರುತ್ತೇವೆ. ಜೀವಾತ್ಮವಾಗಿರುವ ನಾವು ಆ ಶಕ್ತಿಯೊಳಗೆ ಲೀನವಾಗುವುದೇ ಮುಕ್ತಿ ಎನ್ನುತ್ತೇವೆ. ಆ ಶಕ್ತಿಯನ್ನೇ ಆದಿ, ಮಧ್ಯಾಂತಗಳು ಇಲ್ಲದಿರುವುದೆಂದು, ಅವ್ಯಯವಾಗಿರುವುದೆಂದು ಧರ್ಮಶಾಸ್ತ್ರಗಳು ಬೋಧಿಸುತ್ತಿವೆ.

**ಚಂದ್ರ :–** ವಾಟ್! ವಾಟ್! ಬಹಳ ಆಶ್ಚರ್ಯವಾಗಿದೆಯೇ! ಗುರುತ್ವಾಕರ್ಷಣೆ ಶಕ್ತಿಯನ್ನೇ ನೀವು ಪರಮಾತ್ಮವಾಗಿ ಹೇಳುತ್ತಿದ್ದೀರಾ, ಆದರೇ ನಾನೀಗ ಪರಮಾತ್ಮ ಇದ್ದಾನೆಂದು ನಂಬುತ್ತಿದ್ದೇನೆ.

**ವೇಣು :–** ಸಂತೋಷ ಅಣ್ಣಾ! ಇನ್ನೊಂದು ವಿಷಯ ಭೂಮಿಮೇಲೆ ಜನ್ಮಿಸಿದ ಪ್ರತಿ ಪ್ರಾಣಿಗೂ ಸ್ವತಃವಾಗಿ ಕದಲುವ ಶಕ್ತಿ ಹೇಗೆ ಉಂಟಾಗುತ್ತದೆನ್ನುತ್ತೀರಾ?

**ಚಂದ್ರ :–** ಪ್ರತಿ ಪ್ರಾಣವಿರುವ ಶರೀರದಲ್ಲೂ ಅವರ ತಲೆಯಲ್ಲಿ ಮೆದುಳು ಇರುತ್ತದೆ. ಅದರಲ್ಲಿ ಒಂದು ಶಕ್ತಿ ಇರುತ್ತದೆ. ಅದನ್ನೇ ವಿಲ್ ಪವರ್ ಎನ್ನುತ್ತಾರೆ. ಅದರಿಂದ ಪ್ರತಿ ಜೀವರಾಶಿ ಕದಲುತ್ತಿವೆ.

**ವೇಣು :–** ಆ ವಿಲ್ ಪವರ್ ಶಕ್ತಿಯನ್ನೇ ಜ್ಞಾನಿಗಳು ಆತ್ಮಶಕ್ತಿ ಎನ್ನುತ್ತಾರೆ. ಆ ಶಕ್ತಿಯನ್ನು ಯೋಗಾಭ್ಯಾಸದಿಂದ ತಿಳಿದುಕೊಳ್ಳಬಹುದೆಂದು ಸಹ ಆತ್ಮಜ್ಞಾನಿಗಳು ತಿಳಿಸುತ್ತಿದ್ದಾರೆ.

**ಚಂದ್ರ :–** ವೆರೀ ಕರೆಕ್ಟ್ ಬ್ರದರ್, ಈಗ ನಿನ್ನ ಸಿದ್ಧಾಂತವನ್ನು ಒಪ್ಪಿಕೊಳ್ಳುತ್ತಿದ್ದೇನೆ. ಹಾಗೆ ವಾದಿಸಿದಾಗಲೇ ಸೈನ್ಸ್, ವೇದಾಂತ ಎರಡು ಒಂದೇಯಾಗಿ ಬೆರೆಯುತ್ತವೆ. ಇಂತಹ ವಿಷಯಗಳು ಹೇಗೆ ಕಲಿತಿದ್ದೀಯ.?

**ವೇಣು :–** ನಮ್ಮ ಗುರುದೇವರಿಂದ.

**ಚಂದ್ರ :–** ಆಹಾ! ಆದರೇ ನಿಮ್ಮ ಗುರುವು ಅಖಂಡವಾದ ಜ್ಞಾನಿಯಾಗಿ ನನಗೆ ಅರ್ಥವಾಗುತ್ತಿದೆ. ಆತನು ಸಹ ದೊಡ್ಡ ಸೈಂಟಿಸ್ಟ್ ಆಗಿರುತ್ತಾನೆಂದು ಅಂದುಕೊಳ್ಳುತ್ತಿದ್ದೇನೆ. ಇಂತಹ ಸಿದ್ಧಾಂತ ಧರ್ಮಗಳು ನಿನಗೆ ಪ್ರಬೋಧ ಮಾಡಿ, ನಿನ್ನನ್ನು ಜ್ಞಾನಿಯಾಗಿ ಬದಲಾಯಿಸಿರುವುದಕ್ಕೆ ನನಗೆಷ್ಟೋ ಆನಂದ ಉಂಟಾಗುತ್ತಿದೆ. ಆತನ ಹೆಸರೇನು? ಎಲ್ಲಿರುತ್ತಾನೋ ತಿಳಿಸಿದರೇ ನಾನೂ ಸಹ ಆತನನ್ನು ಭೇಟಿಯಾಗುತ್ತೇನೆ.

**ವೇಣು :–** ಆತನ ನಾಮಧೇಯ ನೀನು ಈಗ ಹೇಳಿರುವ ವಾಕ್ಯದಲ್ಲಿಯೇ ಒಳಗೊಂಡಿದೆ. ಆತನ ಸ್ಥಳ, ಆತನ ಹೆಸರು ನಂತರ ತಿಳಿಸುತ್ತೇನೆ.

***(ಅಷ್ಟರಲ್ಲಿ ವೇಣು ಮಾವ ಕಾಮೇಶ ಪ್ರವೇಶಿಸಿ)***

**ಕಾಮೇಶ :–** ಪ್ರವೇಶಿಸುತ್ತಾ ಹಾಡು

ಪ ॥ **ಜೀವುಡೆಕ್ಕಡುನ್ನಾಡೋ ಜೆಪ್ಪರಾ ಅಸಲು**
**ದೇವುಡೆಕ್ಕಡುನ್ನಾಡೋ ಜೆಪ್ಪರಾ**
**ಜೀವುಡೆವಡು? ದೇವುಡೆವಡು?**
**ವಾರಿಕನ್ನ ಪೆದ್ದ ಎವಡು?**
ಚಾಟುಮಾಟಲನ್ನಿ ಮಾನಿ ನೀಟುಗಾನು ಜೆಪ್ಪರಾ ॥ಜೀವು॥

**ಚ॥ (1) ಗಡ್ಡಾಲನು, ಮೀಸಾಲನು ಘನಮುಗಾ ಪೆಂಚಿನೋಡ**
**ಕಾಷಾಯ ಬಟ್ಟಲತೋ ವೇಷಾಲು ವೇಸಿನೋಡ**
**ಮೋಯನನ್ನಿ ಪೂಸಾಲು ಮೆಡನಿಂಡಾ ವೇಸಿನೋಡ**
**ವಿಬೂಧಿ ರೇಖಲೆನ್ನೋ ಇಂಪುಗಾ ಪೂಸಿನೋಡ ॥ಜೀವು॥**

**ಚ॥ (2) ಮಾಯ ವದಲಿ ಪೋವುನಂಚು ಮಂತ್ರಾಲು ಜೆಪ್ಪುತಾರು**
**ತಲಕರ್ಮ ತೀರುನಂಚು ತಾಯೆತ್ತುಲು ಗಟ್ಟುತಾರು**
**ಮುಕ್ತಿ ಗೋರಿ ಮೀಚೆಂತಕು ಭಕ್ತಿಗಾನು ಜೇರಿತೇನು**
**ಬೂಟಕಾಲ ಎನ್ನೊಜೆಪ್ಪಿ ಬೂಡಿದಿಚ್ಚಿ ಪಂಪುತಾರು ॥ಜೀವು॥**

**ಚ॥ (3) ಉಪದೇಶ ಮಿತ್ತುಮಂಚು ವೂರೂರಾ ತಿರುಗುತಾರು**
**ದಂಡಿಗ ಧನಮಿಚ್ಚುನೋಳ್ಳ ತನ ಶಿಷ್ಯುಲಂಟಾರು**
**ಗೊಪ್ಪ ಸ್ವಾಮಿ ವಂಚು ಮ್ರೊಕ್ಕ ಅಬ್ಬರಾನಿ ಕುಬ್ಬುತಾರು**
**ತತ್ತ್ವಮಿಪ್ಪಿ ಜೆಪ್ಪಮಂಟೆ ತೈತಕ್ಕಲಾಡುತಾರು ॥ಜೀವು॥**

**ಚಂದ್ರ :–** ಬಾರಯ್ಯಾ ಬಾ! ದೇವರೇ ಇಲ್ಲ, ದೇವರಿದ್ದರೇ ತೋರಿಸಿ ಎಂದು ಎಲ್ಲರ ಮುಂದೆ ಹೇಳುತ್ತಿರುತ್ತೀಯಾ ನಿನ್ನ ನಾಸ್ಥಿಕವಾದಕ್ಕೆ ಫುಲಿಸ್ಟಾಪ್ ಬೀಳುತ್ತದೆ ಬಾ.

**ಕಾಮೇಶ :–** ನನ್ನ ನಾಸ್ತಿಕವಾದಕ್ಕೆ ಫುಲಿಸ್ಟಾಪ್ ಇಡುತ್ತೀರ! ಯಾರು ಎಲ್ಲಿ, ಎಲ್ಲಿ ಆ ಮಗಧೀರನು? ನನ್ನ ಮುಂದಕ್ಕೆ ಬಂದು ನಿಂತು ಮಾತನಾಡಲು ಹೇಳು ದಮ್ಮಿದ್ದರೆ.

**ವೇಣು :–** ಹೆಂಡ ಸಾರಾಯಿ ಕುಡಿದಿದ್ದೀಯ ಕಾಮೇಶ ಮಾವಾ, ಹಾಗೆ ಕುಣಿದಾಡುತ್ತಿದ್ದೀಯ ಆ ಮಗಧೀರನು ನಾನೇ.

**ಕಾಮೇಶ :–** ಮರಿ ಕಾಗೆಗೇನು ಏನು ತಿಳಿದಿದೆ ತೋಳದ ಏಟು. ನೀನು ನನ್ನ ನಾಸ್ತಿಕತ್ವವನ್ನು ನಾಸ್ತಿ ಮಾಡಬಲ್ಲ ಪುರುಷ ಪುಂಗವನಾ, ನನ್ನ ಮೂರು ಪ್ರಶ್ನೆಗಳಿಗೆ ಉತ್ತರ ಹೇಳಬಲ್ಲೆಯಾ.

**ವೇಣು :–** ಹೇಳಿದರೇ?

**ಕಾಮೇಶ :–** ನೀನು ಸರಿಯಾದ ಉತ್ತರಗಳನ್ನು ಹೇಳಿದರೇ, ಈಗಲೇ ನನ್ನ ನಾಸ್ತಿಕತ್ವವನ್ನು ಬಿಟ್ಟು ಆಸ್ಥಿಕತ್ವವನ್ನು ಕೈಹಿಡಿಯುತ್ತೇನೆ. ಮೊದಲ ಪ್ರಶ್ನೆ ಜೀವಿಯಾರು? ಎಲ್ಲಿರುತ್ತಾನೆ? ಯಾವ ಕೆಲಸ ಮಾಡುತ್ತಿರುತ್ತಾನೆ?

**ವೇಣು :–** ಜೀವಿಯು ಪರಮಾತ್ಮವೊಂದರ ಅಂಶದವನೇ. ಆದರೂ ಪ್ರಕೃತಿ ಪ್ರಭಾವಕ್ಕೆ ಒಳಗಾಗಿ ಕರ್ಮದಲ್ಲಿ ಬಂಧಿಸಲ್ಪಟ್ಟಿದ್ದಾನೆ. ಜೀವಿಯು ಪ್ರತಿ ಪ್ರಾಣಿ ತಲೆಯಲ್ಲಿ ಗುಣಚಕ್ರದಲ್ಲಿ, ಗುಣಗಳ ಮಧ್ಯದಲ್ಲಿ, ಅವುಗಳೊಂದಿಗೆ ಸಂಬಂಧ

ಇಟ್ಟುಕೊಂಡಿದ್ದು ಗುಣಗಳು ಮಾಡಿಸುವ ಕೆಲಸಗಳೊಂದರ ಸುಖ ದುಃಖ ಕರ್ಮಗಳನ್ನು ಅನುಭವಿಸುತ್ತಿರುತ್ತಾನೆ.

**ಕಾಮೇಶ :–** ಜೀವಿಗೆ ಹಿರಿಯನ್ಯಾರು? ಎಲ್ಲಿರುತ್ತಾನೆ? ಏನು ಮಾಡುತ್ತಿರುತ್ತಾನೆ?

**ವೇಣು :–** ಜೀವಾತ್ಮನಿಗಿಂತ ದೊಡ್ಡದು ಆತ್ಮವೇ, ಆತ್ಮ ಸರ್ವ ಶರಿರಗಳಲ್ಲಿಯೂ ತಲೆಯಿಂದ ಗುದ ಸ್ಥಾನದವರೆಗು ವ್ಯಾಪಿಸಿದ ಬ್ರಹ್ಮನಾಡಿಯಲ್ಲಿರುತ್ತದೆ. ಈ ಆತ್ಮ ಸರ್ವ ಶರೀರಗಳ ಚೈತನ್ಯಕಾರಣವಾಗಿ ಇದ್ದು ಕರ್ಮ ಪ್ರಕಾರ ಶರೀರದೊಂದಿಗೆ ಕೆಲಸಮಾಡಿಸುತ್ತಿರುತ್ತದೆ.

**ಕಾಮೇಶ :–** ಕೊನೆಯ ಪ್ರಶ್ನೆ ಇವರಿಬ್ಬರಿಗಿಂತ ದೊಡ್ಡವ ಯಾರಾದರೂ ಇದ್ದಾರಾ? ಇದ್ದರೇ ಯಾರು? ಎಲ್ಲಿರುತ್ತಾನೆ?

**ವೇಣು :–** ಇವರಿಬ್ಬರಿಗಿಂತ ದೊಡ್ಡವ ಪರಮಾತ್ಮ, ಸಮಸ್ತ ವಿಶ್ವವೂ ವ್ಯಾಪಿಸಿ, ಪ್ರಕೃತಿಗೆ ಅಧಿಪತಿಯಾಗಿ, ಚರಾಚರ ಪ್ರಕೃತಿಯನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡು, ಸೃಷ್ಠಿ, ಸ್ಥಿತಿ, ಲಯಗಳಿಗೆ ಕಾರಣವಾಗಿದ್ದೂ, ಗಮನಿಸಿದರೇ ನಮ್ಮ ಶರೀರದಲ್ಲಿಯೇ ಇದ್ದಾನೆ.

**ಕಾಮೇಶ :–** ಶಹಭಾಷ್ ಅಳಿಯಾ! ಶಹಭಾಷ್! ನಾನು ಇಲ್ಲಿಯವರೆಗು ಎಷ್ಟೋ ಸ್ವಾಮೀಜಿಗಳನ್ನು ಸನ್ಯಾಸಿಗಳನ್ನು, ವೇದಾಂತರನ್ನು ಪರಾಮರ್ಶಿಸಿ ನೋಡಿದ್ದೇನೆ. ಯಾರು ನೋಡಿದರೂ, ನಾನು ಕೇಳಿದ ಪ್ರಶ್ನೆಗಳಿಗೆ ಶರೀರದ ಹೊರಗೆ ಹೇಳುತ್ತಾರೆ. ಆದರೆ ಶರೀರಾಂತರ್ಗತವಾಗಿ ಇಷ್ಟು ಸಕ್ರಮವಾಗಿ ಹೇಳಿದವರು ಇಲ್ಲ. ಇಲ್ಲಿಗೆ ನಾನು ನನ್ನ ನಾಸ್ಥಿಕವಾದವನ್ನು ಕಟ್ಟಿಡುತ್ತಿದ್ದೇನೆ. ಆದರೆ ಶರೀರದಲ್ಲೇ ದೇವರು ಇದ್ದಾನೆಂದು ನಿರೂಪಣೆಯಾಗಿ ಹೇಳಬಲ್ಲೆಯಾ?

**ವೇಣು :–** ಮಾವನವರೆ, ನಿನ್ನ ಮೂಗಿನ ರಂಧ್ರಗಳಲ್ಲಿ ಮೇಲಕ್ಕು ಕೆಳಗೂ ಆಡುತ್ತಿರುವ ಶ್ವಾಸ ಹೇಗೆ ಆಡುತ್ತಿದೆ, ಯಾವ ಆಧಾರದಿಂದ ಆಡುತ್ತಿದೆ?

**ಕಾಮೇಶಂ :–** (ಮೂಗಿನ ಶ್ವಾಸವನ್ನು ಮೇಲಕ್ಕೂ ಕೆಳಕ್ಕೂ ಆಡಿಸಿ) ನಾನು ಆಸ್ವಾಧಿಸುತ್ತೇನೆ ಹೊರಗೆ ಬಿಡುತ್ತಿದ್ದೇನೆ.

**ವೇಣು :–** ಈಗ ಎಚ್ಚರದಲ್ಲಿ ಇದ್ದೀಯಾ ಆದ್ದರಿಂದ ನೀನು ಆಸ್ವಾಧಿಸುತ್ತಿದ್ದೀಯ ಬಿಡುತ್ತಿದ್ದೀಯ, ನೀನು ನಿದ್ರೆ ಹೋದಾಗ ಹೇಗೆ ಆಡುತ್ತಿದೆಯೆನ್ನುತ್ತೀಯ?

**ಕಾಮೇಶಂ :–** ಹೇಗೆ ಆಡುತ್ತಿದೆ, ಹೇಗೆ ಆಡುತ್ತಿದೆಯೋ ತಿಳಿದಿಲ್ಲ.

**ವೇಣು :–** ತಿಳಿದಿಲ್ಲವಾ ಮಾವಾ! ಜಾಗ್ರತೆ, ಸ್ವಪ್ನ, ಸುಷುಪ್ತರೆನ್ನುವ ಮೂರು ಅವಸ್ಥೆಗಳಲ್ಲಿಯೂ ಆತ್ಮಮೂಲವಾಗಿಯೇ ಶ್ವಾಸ ಆಡುತ್ತಿದೆ. ಆ ಆತ್ಮವನ್ನು ತಿಳಿದುಕೊಳ್ಳುವುದೇ ಆಧ್ಯಾತ್ಮಿಕ ಜ್ಞಾನ. ಆ ಆತ್ಮವೇ ನಿನ್ನ ಶರೀರದಲ್ಲಿನ ದೇವರು.

**ಕಾಮೇಶ :–** ಆಹಾ! ಅಮೋಘವಾದ ರಹಸ್ಯ ತಿಳಿಸಿದ್ದೀಯ ಅಳಿಯಾ. ಇಂತಹುಗಳು ದಿವ್ಯಜ್ಞಾನಿಯಾದ ಗುರು ಮುಖಾಂತರ ಬಂದಿರುತ್ತವೆ. ಇಂತಹ ಜ್ಞಾನ ವಿಷಯಗಳು ಪ್ರಬೋಧ ಮಾಡಿದ ನಿಮ್ಮ ಗುರು ಯಾರೋ ತಿಳಿಸು, ನಾನೂ ಸಹ ಆನಂದದಿಂದ ಆತನನ್ನು ಸೇರಿ ಜ್ಞಾನ ತಿಳಿದುಕೊಳ್ಳುತ್ತೇನೆ.

**ವೇಣು :–** ಸರಿ! ಮೊದಲು ಊಟ ಮಾಡೋಣ ನಡಿ ಮಾವಾ, ನಂತರ ಹೇಳುತ್ತೇನೆ. ಆದರೂ ನೀನು ಅರ್ಥಮಾಡಿಕೊಂಡರೆ ನೀನು ಈಗ ಹೇಳಿದ ವಾಕ್ಯದಲ್ಲಿಯೇ ಇದೆ ನಮ್ಮ ಗುರುವಿನ ಹೆಸರು.

***(ಅಷ್ಟರಲ್ಲಿ ವೇಣು ತಂದೆ ಕಾಟಮಯ್ಯ ಪ್ರವೇಶಿಸಿ)***

**ಕಾಟಮಯ್ಯ :–** ಅರೇ ವೇಣು, ಮೊನ್ನೆ ಬೆಳಗ್ಗೆ ಹೋದವನು ಈಗ ಕಾಣಿಸುತ್ತಿದ್ದೀಯ? ಇಲ್ಲಿಯವರೆಗು ಎಲ್ಲಿಗೆ ಹೋಗಿದ್ದೀಯ, ಯಾವ ಘನಕಾರ್ಯ ಗಳನ್ನಾಚರಿಸಿದ್ದೀಯ?

**ಪೂರ್ಣಯ್ಯ :–** ತಂದೆ ಕಾಟಮಯ್ಯ! ವೇಣು ಒಳ್ಳೆಯ ಬುದ್ಧಿವಂತನಾಗುತ್ತಿದ್ದಾನೆ. ಗುರು ಆಶ್ರಮಕ್ಕೆ ಹೋಗಿದ್ದಾನಂತೆ ಒಳ್ಳೆಯ ದೈವಜ್ಞಾನವನ್ನು ತಿಳಿದುಕೊಂಡು ಬಂದಿದ್ದಾನೆ.

**ಕಾಟಮಯ್ಯ :–** ಏನಪ್ಪಾ ಇವನು ಆಶ್ರಮಕ್ಕೆ ಹೋಗಿದ್ದಾನಾ! ಹಾಗಾದರೇ ವೇದಾಂತದೊಳಗೆ ಇಳಿದಿದ್ದಾನೆನ್ನುವ ಮಾತು, ಎಲ್ಲೈ ಲಕ್ಷಣವಾಗಿ ತಿಂದು ಕೆಲಸಬಗುಸು ಇಲ್ಲದಂತೆ ಆಶ್ರಮಗಳು, ಗುರುಗಳು ಎಂದು ತಿರುಗುತ್ತಿದ್ದರೆ ಕಾಪುರ ಸರಿಹೋದಂತೆ.

## ಹಾಡು

ಪ॥ **ಪೋ ಪೋರ ಪೊಮ್ಮಿಕನ್ ನೀ ಮುಖಂ ಚೂಪಿಂಚರಾವಲದು ರಾತಗದು ಪೋ ಪೋರ ಪೊಮ್ಮಿಕನ್**

**ಚೇನುಲ ತೋಟಲ ಪನುಲುಮಾನಿ**
**ಜ್ಞಾನಂ ಗೀನಂ ಅಂಟೂ ನೀವು**
**ಆಶ್ರಮಂಬುಲ ವೆಂಟ ತಿರಿಗೆಡಿ**
**ಆಕತಾಯಿ ವೆಧವ ಅಲ್ಲರಿನಾಕೊಡಕಾ**
**ತಂತಾ! ನಡ್ಡಿವಿರಗ ತಂತಾ ನೀ ಪಂಡ್ಲು ಊಡಗೊಡತ**
**ನೀ ಚರ್ಮಮೊಲಚಿವೇಸ್ತಾ (ಎಂದು ವೇಣುನನ್ನು**
**ಹೊಡೆಯಲು ಹೋದಾಗ)**

*(ಅಷ್ಟರಲ್ಲಿ ವೇಣು ತಾಯಿ ಕನಕಮ್ಮ ಬಂದು ಅಡ್ಡಬಂದು)*

**ಕನಕ :–** ಏನ್ರೀ ಅವನನ್ನು ಹೊಡೆಯಬೇಡ್ರಿ, ನಾನು ಬುದ್ಧಿ ಹೇಳುತ್ತೇನೆ. (ವೇಣುನೊಂದಿಗೆ) ಏನೋ ವೇಣು? ನಿಮ್ಮ ಅಪ್ಪನಿಗೆ ಕೋಪ ಬರುವ ಕೆಲಸಗಳನ್ನು ಏಕೆ ಮಾಡುತ್ತೀಯೋ!

## ಪದ್ಯ

**ತೆ॥ಗೀ॥** **ಮುಸಲಿ ಮತಕಲು ಕೋರೆಡಿ ಮುಕ್ತಿ ವಿದ್ಯ**
**ಪಡುಚುಪ್ರಾಯಂಬುನಂದೇಲ ಪಟ್ಟಕಯ್ಯಾ**
**ಇಲನು ಸಂಸಾರ ಮಂದುನೇ ಗಲದು ಸುಖಮು**
**ವದ್ದುವದ್ದು ಸನ್ಯಾಸಿ ಬ್ರತುಕಿಂಕ ಮುದ್ದು ತನಯಾ**

**ವೇಣು :–** ಅಮ್ಮಾ! ಆಶ್ರಮಕ್ಕೆ ಹೋಗಿ ಜ್ಞಾನವನ್ನು ತಿಳಿದುಕೊಂಡಷ್ಟು ಮಾತ್ರಕ್ಕೆ, ಮದುವೆ ಮಠ ಇಲ್ಲದಂತೆ, ಸನ್ಯಾಸಿಯಾಗಿ ಛತ್ರಗಳನ್ನು ಚಾವಡಿಗಳನ್ನು ಸೇರುತ್ತೇನೆಂದುಕೊಂಡಿದ್ದೀರ ಅದೇನೂ ಇಲ್ಲ. ನಮ್ಮ ಗುರುಗಳು ನಮಗೆ ಬೋಧಿಸುವುದೆಲ್ಲಾ ರಾಜಯೋಗ ಸಿದ್ಧಾಂತ.

**ಕಾಟಮಯ್ಯ :–** ನಿನ್ನ ಪಿಂಡಾಕೂಳು ಸಿದ್ಧಾಂತಕಣೋ, ಅಕ್ಕಪಕ್ಕದವರನ್ನು ನೋಡು, ಹೇಗೆ ಕೆಲಸಗಳು ಮಾಡಿಕೊಳ್ಳುತ್ತಾ ಸಂಪಾದಿಸಿಕೊಂಡು ಹೇಗೆ ಬದುಕುತ್ತಿದ್ದಾರೋ, ಮಾನವನಾಗಿ ಹುಟ್ಟಿರುವುದಕ್ಕೆ ನಾಚಿಕೆ ಮಾನ ಇರಬೇಕೋ.

**ವೇಣು :–** ಅಪ್ಪಾ! ನಾನೇನೂ ಪೋಲಿ ಪುಂಡನಾಗಿ ಅಲೆದಾಡಿಲ್ಲ! ಭಕ್ತಿ, ಜ್ಞಾನ, ಯೋಗಗಳ ಕುರಿತು ತಿಳಿದುಕೊಳ್ಳುತ್ತಿದ್ದೇನೆ. ಅದು ತಪ್ಪೆಂದರೆ ಹೇಗೆ.

**ಕಾಟಮಯ್ಯ :–** ತಪ್ಪೇ ಇಲ್ಲ ಎನ್ನುತ್ತೀಯ ನನ್ನ ಮಗನೇ.

**ತೆ॥ಗೀ॥** **ಇಂತ ಜೆಪ್ಪಿನ ವಿನ ನೀ ಇಚ್ಛರೀತಿ**
**ವೆಡಲುಚುನ್ನನು ನಾಯಾಸ್ಥಿ ಕಡಕು ನೀಕು**
**ಚಿಲ್ಲಗವ್ವೈನ ಇವ್ವನು ಕಲ್ಲಗಾದು**
**ಮುಂದು ಜೂಪುನು ಗನುಮಿಂಕ ಮೂರ್ಖಚಿತ್ತಾ.**

**ವೇಣು :–** ಅಪ್ಪಾ ಆಸ್ಥಿ, ಐಶ್ವರ್ಯ ಅಶಾಶ್ವತವಾಗಿರುವವು, ಹೋಗುವಾಗ ಏನಾದರೂ ಹಿಂದೆ ತೆಗೆದುಕೊಂಡು ಹೋಗುತ್ತೇವಾ, ಹಾಗೆಯೇ ಮಾಡಿರಿ. ಆಸ್ಥಿಪಾಸ್ಥಿಗಳು ಕರ್ಮಾನುಸಾರವಾಗಿ ಉಂಟಾಗುತ್ತದೆ, ಆದರೆ ಜ್ಞಾನ ಮಾತ್ರ ಶ್ರದ್ಧಾನುಸಾರವಾಗಿ ಉಂಟಾಗುತ್ತವೆ. ನಿಮ್ಮ ನಿರ್ಣಯ ಅದೇ ಆದರೇ ಜ್ಞಾನಕ್ಕೋಸ್ಕರ ಯಾವುಗಳನ್ನಾದರೂ ಬಿಡುವುದಕ್ಕೆ ಸಿದ್ಧವಾಗಿ ಇದ್ದೇನೆ.

**ಕಾಟಮಯ್ಯ :–** ಹಾಗಾದರೇ ನೀ ಎಲ್ಲದಕ್ಕೂ ಸಿದ್ಧವಾಗಿ ಇದ್ದೇಯೆನ್ನುವ ಮಾತು. ಹೋಗು! ನಿನ್ನ ಮುಖ ಇನ್ನು ನನಗೆ ತೋರಿಸಬೇಡ.

## ಹಾಡು

**ಪ॥ ಪೋಪೋರ ಪೊಮ್ಮಿಕನ್ ನೀ ಮುಖಮುನಾಕಿಂಕ ಚೂಪಿಂಚ**
**ರಾವಲದು ರಾತಗದು ಪೋ ಪೋರ ಪೊಮ್ಮಿಕನ್**

**ಚ॥ ತಲ್ಲಿದಂಡ್ರುಲ ಮಾಟಲು ವಿನಕ**
**ಇಲ್ಲೂ ವಾಕಿಲಿ ಕಲ್ಲಗದಲಚಿ**
**ಸ್ವಾಮುಲು ಗೀಮುಲು ಅಂಟೂ ನೀವು**
**ಯೇಮೋ ಯೇಮೋ ವಾಗುಚುನಂಟಿವಿ**
**ಕೊಡತಾ! ಕಾಳ್ಳು ವಿರಗ ಕೊಡತಾ! ನೀ**
**ಕೀಳ್ಳು ವಿರಚಿವೇಸ್ತಾ! ನೀ ವೀಪು ಬಗುಲಕೊಡತಾ ॥ಪೋಪೋ॥**

(ವೇಣು ನನ್ನ ಹೊಡೆಯಲು ಹೋದಾಗ ತಾಯಿ ಕನಕ ಅಡ್ಡಬಂದು ಏನ್ರೀ ಹೊಡೆಯಬೇಡ್ರಿ, ಹೊಡೆಯಬೇಡ್ರಿ ಎಂದು ಅಡ್ಡ ಬಂದಾಗ ಕಾಟಮಯ್ಯ ಹೆಂಡತಿಯನ್ನು ಒಂದು ಏಟು ಹಾಕಿದಾಗ ಕೆಳಗೆ ಬೀಳುತ್ತಾಳೆ)

**ಪೂರ್ಣಯ್ಯ :–** (ಬೇಗನೆ ಎದ್ದು) ಎಲೈ ಕಾಟಿಗ! ಎಂತಹ ಕೆಲಸ ಮಾಡಿದ್ದೀಯ! ಅವನು ಆಶ್ರಮಗಳಿಗೆ ಹೋದರೆ ಏನು, ನಿನಗೆ ಏನು ಹೋಗುವ ಕಾಲ ಬಂದಿದೆಯೋ, ಅನ್ಯಾಯವಾಗಿ ಆಕೆಯನ್ನು ಹೊಡೆದಿದ್ದೀಯ. (ಕನಕ ಬಳಿ ಬಗ್ಗಿ ಅಮ್ಮಾ ಕನಕ ಕನಕ ಎನ್ನುತ್ತಾನೆ.)

**ಕಾಟಮಯ್ಯ :–** ನಾನೇನು ಮಾಡುತ್ತೇನೆ ತಂದೆ! ವೇಣುನನ್ನು ಹೊಡೆಯಲು ಹೋದರೆ ಅಡ್ಡ ಬಂದಿದ್ದಾಳೆ, ಏಟು ತಾಕಿ ಕೆಳಗೆ ಬಿದ್ದಿದ್ದಾಳೆ. ಆಕೆ ಕರ್ಮ ನನ್ನನ್ನೇನು ಮಾಡೆನ್ನುತ್ತೀಯಾ.

**ಕಾಮೇಶ :–** ಬಾವಾ! ಮೊದಲೇ ನಿಮಗೆ ಕೋಪ ಮೂಗಿನ ಮೇಲೆ ಇರುತ್ತದೆ. ವೇಣು ಏನು ತಪ್ಪು ಮಾಡಿದ್ದಾನೆಂದು, ಜ್ಞಾನಾರ್ಜನ ನಿಮ್ಮ ದೃಷ್ಟಿಯಲ್ಲಿ ತಪ್ಪಾದರೆ ನಿಮಗಿಂತ ಮೂರ್ಖನು ಈ ಲೋಕದಲ್ಲಿ ಇರುವುದಿಲ್ಲ. ತಂಗಿಯನ್ನು

ನಿಷ್ಕಾರಣವಾಗಿ ಹೊಡೆದಿದ್ದೀಯ. (ಕನಕಂಳನ್ನು ಹಿಡಿದುಕೊಂಡು ಅಮ್ಮಾ ತಂಗಿ, ಅಮ್ಮಾ ತಂಗಿ, ಅಮ್ಮಾ ತಂಗಿ ಎದ್ದೇಳಮ್ಮಾ ಎನ್ನುತ್ತಾನೆ.)

**ಚಂದ್ರ :–** (ಪ್ರವೇಶಿಸಿ) ಡಾಮಿಟ್ ಎಷ್ಟು ಕೆಲಸ ನಡೆದಿದೆ ಅಪ್ಪಾ! ಈ ನಡುವೆ ನಿಮಗೆ ಕೋಪ ಜಾಸ್ತಿ ಆಗುತ್ತಿದೆ, ಕೋಪ ಜಾಸ್ತಿ ಇದ್ದರೆ ಗುಂಡಿಗೆ ರೋಗ ಬರುತ್ತದೆ. ಯಾವಾಗ ನೋಡಿದರೂ ಕೆಲಸ ಕೆಲಸ ಎಂದು ಬಿದ್ದು ಸಾಯುತ್ತೀಯ.

**ಕಾಟಮಯ್ಯ :–** ಅನ್ರೋ! ಅನ್ರಿ. ಎಲ್ಲರೂ ನನ್ನನ್ನೇ ಅನ್ರಿ. ಈ ಕೊಂಪೆಯಲ್ಲಿ ನಾನು ಎಲ್ಲರಿಗೂ ಕೇವಲವಾಗಿ ಹೋಗಿದ್ದೇನೆ, ಆಗಲೀ ತಂದೆ! ನಿಮ್ಮ ಅಮ್ಮನನ್ನು ನೋಡು (ಎಲ್ಲರೂ ಸೇರಿ ಕನಕಮ್ಮನನ್ನು ಮೇಲಕ್ಕೆ ಎಬ್ಬಿಸಿದಾಗ ಕನಕಮ್ಮ ಇದ್ದಕ್ಕಿದ್ದಂತೆ ಜೋರಾಗಿ ಎಲ್ಲರನ್ನೂ ಬಿಡಿಸಿಕೊಂಡು ಕೂದಲುಗಳನ್ನು ಬಿಟ್ಟುಕೊಂಡು ಆಕಳಿಸುತ್ತಾ ಹೂ ಹೂ ಎಂದು ಮೂಲ್ಗುತ್ತಾಳೆ.)

**ಕಾಟಮಯ್ಯ :–** (ಭಯದಿಂದ ಕೂಡಿದ ಆತುರತೆಯಿಂದ) ಅರೇ ಚಂದ್ರ, ಅರೇ ವೇಣೂ, ನಿಮ್ಮ ಅಮ್ಮನನ್ನು ನೋಡ್ರೋ ಇದೇನೋ ಮಾಯೆ ರೋಗವಿದ್ದಂತೆ ಇದೆ. ಯಾರಾದರೂ ಕೂಡಲೇ ಡಾಕ್ಟರ್‌ನ್ನು ಕರೆದುಕೊಂಡು ಬರ್ರಿ.

**ವೇಣು :–** ಅಪ್ಪಾಜಿ! ಇದು ಡಾಕ್ಟರ್‌ಗಳು ಗುಣಪಡಿಸುವಂತಹ ರೋಗವಲ್ಲ. ಇದು ಒಂದು ಗ್ರಹ ಚೇಷ್ಟೆ.

**ಕಾಟಮಯ್ಯ :–** ಏನೂ ಗಾಳಿ ಚೇಷ್ಟೆಯಾ! ಅರೇ ಕೇಳ್ರೋ ಯಾರೋ? ಯಾಕೆ ಬಂದಿದ್ದಾರೋ? ಏನು ಬೇಕೋ.

**ವೇಣು :–** ನೀವೆಲ್ಲಾ ಪಕ್ಕಕ್ಕೆ ಸರಿಯಿರಿ ನಾನು ಕೇಳುತ್ತೇನೆ. ಅಮ್ಮಾ ಅಮ್ಮಾ ಏನಾಗಿದೆ ನಿನಿಗೆ, ಯಾರು ನೀನು? ಹೇಳು ತಾಯಿ ಹೇಳು ನಿನಗೇನು ಬೇಕು.

**ಕನಕ :–** (ಜೋರಾಗಿ ಮೈ ಮುರಿದು) ಎಲೈ! ನಾನು, ನಾನುಕಣೋ ನಿಮ್ಮ ಮುತ್ತಜ್ಜಿ ಮರ್ರೆಮ್ಮ.

**ವೇಣು :–** ಅಪ್ಪಾ! ನಿಮ್ಮ ಅಮ್ಮನವರಂತೆ ಏಕೆ ಬಂದಿದ್ದಾಳೋ ಕೇಳು.

**ಕಾಟಮಯ್ಯ :–** ಅಮ್ಮಾ! ತಾಯಿ ಏಕೆ ಬಂದಿದ್ದೀಯಮ್ಮಾ, ನಿನಗೇನು ಕಡಿಮೆ ಮಾಡಿದ್ದೇವೆ. ಪ್ರತಿ ವರ್ಷ ಸೀರೆಗಳು, ರವಿಕೆಗಳು ಇಡುತ್ತಿದ್ದೀವಲ್ಲವೆ, ಹಿರಿಯರ ದಿನ ಮಾಡಿಕೊಳ್ಳುತ್ತಿದ್ದೀವಲ್ಲವೆ.

**ಕನಕ ಮರೆಮ್ಮ :–** ಅರೇ ಕಾಟಿಗಾ ಸೀರೆಗಳು, ರವಿಕೆಗಳು ನನಗೆ ಏಕೆ? ಆದರೂ ನನಗವು ಇಡುತ್ತೀರ, ನೀವೇ ಕಟ್ಟಿಕೊಳ್ಳುತ್ತೀರ. ಹಿರಿಯರ ದಿನವೆಂದು ಹೇಳಿ ಎಲ್ಲ ಅಡುಗೆಗಳು ಮಾಡಿಕೊಂಡು ನೀವೇ ತಿನ್ನುತ್ತೀರ. ಏನೋ ನಿಮ್ಮೆಲ್ಲರನ್ನು ನೋಡಿ ಹೋಗೋಣ ಎಂದು ಬಂದಿದ್ದೇನೆ.

**ಪೂರ್ಣಯ್ಯ :–** ಏಯ್ ಮುದುಕಿ! ಬದುಕಿರುವತನಕ ಸಾಧಿಸಿದ್ದೀಯ, ಸತ್ತಮೇಲೆ ಕೂಡ ಸಾಧಿಸುವುದಕ್ಕೆ ಬಂದಿದ್ದೀಯ.

**ಕನಕ ಮರೆಮ್ಮ :–** ಏಯ್ ಮುಂಡೇ ಮಗನೇ ಬಾಯಿ ಮುಚ್ಚುತ್ತೀಯಾ ಇಲ್ವಾ?

**ಪೂರ್ಣಯ್ಯ :–** ಈಕೆಗೆ ಸತ್ತಮೇಲೂ ಸಹ ನನ್ನ ಮೇಲೆ ಗೌರವ ಇಲ್ಲವೇ. ಕರ್ಮ ಕರ್ಮ ಸರೇ ಮುಚ್ಚಿಕೊಳ್ಳುತ್ತೇನೆ ಬಿಡು.

(ಬಾಯಿ ಮುಚ್ಚಿಕೊಂಡು ಪಕ್ಕಕ್ಕೆ ಹೋಗುವನು)

**ಕನಕ ಮರೆಮ್ಮ :–** ಏಯ್ ಕಾಟಮಯ್ಯಾ! ಆವಾಗಿನಿಂದ ನೋಡುತ್ತಿದ್ದೇನೆ, ನನ್ನ ಚಿಕ್ಕ ಮೊಮ್ಮಗ ವೇಣೂ ಮೇಲೆ ಕಾರ, ಮೆಣಸು, ಹರೀತಿದ್ದೀಯಾ ಅವನು ಎಲ್ಲಿಗೆ ಹೋದರೇ ನಿನಗೇನು? ಎಲ್ಲಿದ್ದರೇ ನಿನಗೇನು? ಅವನೆಂದರೇ ನನಗೆ ಬಹಳ ಪ್ರೇಮ, ಇನ್ಮುಂದೆ ಅವನನ್ನು ಏನಾದರೂ ಅಂದರೆ ನಾನು ಸಹಿಸುವುದಿಲ್ಲ. ನಿಮ್ಮ ಸಂಸಾರವನ್ನೆಲ್ಲಾ ಚೆಲ್ಲಾಪಿಲ್ಲಿ ಮಾಡುತ್ತೇನೆ. ತಿಳಿದಿದೆಯಾ ಆ...

**ಕಾಟಮಯ್ಯ :–** ಅಮ್ಮಾ ನನಗೆ ಬುದ್ಧಿ ಬಂದಿದೆ. ಇನ್ನು ಮುಂದೆ ಅವನನ್ನು ಏನೂ ಅನ್ನುವುದಿಲ್ಲ. ಬುದ್ಧಿವಂತನಾಗಿ ಸಂಸಾರವನ್ನಾದರೂ ಮಾಡಿಕೊಳ್ಳಲಿ, ಸನ್ಯಾಸಿಯಾಗಿ ಚಿಪ್ಪು ತೆಗೆದುಕೊಂಡು ದೇಶಗಳಾದರೂ ಹಿಡಿಯಲಿ ಏನಾದರೂ ಅಂದರೆ ನಿನ್ನ ಮೇಲೆ ಆಣೆ ಇನ್ನು ಹೋಗುತಾಯಿ.

**ವೇಣು :–** ಅಜ್ಜಿ! ಇನ್ನು ನೀನು ಹೋಗು, ಇವರು ನನ್ನನ್ನು ಏನೆಂದರೂ ಭಯಪಡುವುದಿಲ್ಲ. ಅಸಲು ನಾನೇನು ತಪ್ಪು ಮಾಡಿದ್ದೀನಿ. ಕುಡಿದು ಕುಪ್ಪಳಿಸಿದ್ದೀನಾ, ಜೂಜನ್ನು ಆಡಿದ್ದೇನಾ ಅಥವಾ ವ್ಯಭಿಚಾರ ಮಾಡಿದ್ದೇನಾ ಅವೇನೂ ಮಾಡಲಿಲ್ಲವೇ. ನಾನು ಶ್ರೀ ಯೋಗ ಪೀಠಾಧಿಪತಿ ಪ್ರಬೋಧಾಶ್ರಮವಾಸಿಯಾದ ಶ್ರೀಶ್ರೀಶ್ರೀ ಸ್ವಾಮಿ ಪ್ರಬೋಧಾನಂದ ಯೋಗೀಶ್ವರರ ಹತ್ತಿರಕ್ಕೆ ಹೋಗಿ ಜ್ಞಾನ ತಿಳಿದುಕೊಂಡಿದ್ದೇನೆ ಅಷ್ಟೇ.

**ಕನಕ ಮರೆಮ್ಮ :–** ಏನೂ! ನಿಮ್ಮ ಗುರು ಶ್ರೀ ಸ್ವಾಮಿ ಪ್ರಬೋಧಾನಂದ ಯೋಗೀಶ್ವರರಾ! ಪ್ರಬೋಧಾಶ್ರಮವಾ! ಅರೇ ನಾನು ಹೋಗುತ್ತಿದ್ದೇನೆ, ಹೊರಟು ಹೋಗುತ್ತಿದ್ದೇನೆ. ಆ ಸ್ವಾಮಿ ಹೆಸರು ಎಲ್ಲಿ ಕೇಳಿಸಿದರೆ ಅಲ್ಲಿ ನಾನು ಕ್ಷಣವಾದರೂ ಇರುವುದಕ್ಕೆ ಅವಕಾಶವಿಲ್ಲ ಹೋಗುತ್ತಿದ್ದೇನೆ, ಹೊರಟು ಹೋಗುತ್ತಿದ್ದೇನೆ. (ಜೋರಾಗಿ ಆಕಳಿಸಿ, ತಲೆ ಕೊಡವಿ ಮೈಮುರಿಯುತ್ತಾ ದೆವ್ವ ಬಿಟ್ಟು ಹೋಗುತ್ತದೆ)

**ಕಾಟಮಯ್ಯ :–** ತಂದೆ ವೇಣೂ! ನಿಮ್ಮ ಗುರು ನಾಮ ಮಹಾಶಕ್ತಿವಂತ ವಾದುದೇ! ಏನೋ ಅಂದುಕೊಂಡಿದ್ದೇನೆ ದೆವ್ವಗಳು ಸಹಿತ ಹೆದರಿ ಓಡಿಹೋಗುತ್ತಿವೆ. ಇನ್ನು ಎಂದಿಗೂ ನಿನ್ನನ್ನು ಏನೂ ಅನ್ನುವುದಿಲ್ಲ, ನಿನ್ನ ಬುದ್ಧಿ ಹುಟ್ಟಿದಾಗ ಆಶ್ರಮಕ್ಕೆ ಹೋಗಿ ಬರುತ್ತಾ ಇರು, ಮನೆ ಕೆಲಸಗಳು ಮಾಡುತ್ತಿರು.

**ವೇಣು :–** ಸಂತೋಷ ಅಪ್ಪಾಜೀ, ನಿಮ್ಮ ಎಲ್ಲರ ಮನಸ್ಸನ್ನು ನಮ್ಮ ಗುರುಗಳೇ ಒಳ್ಳೆಯದಾಗಿ ಬದಲಾಯಿಸಿದ್ದಾರೆ.

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರಿಗೆ (ಎಲ್ಲರೂ ಜೈ ಎಂದರು)**

ತ್ರೈತ ಸಿದ್ಧಾಂತ ಆದಿಕರ್ತನಿಗೆ (ಎಲ್ಲರೂ ಜೈ ಎಂದರು)

ಶ್ರೀ ಪ್ರಬೋಧಾಶ್ರಮ ಗುರುದೇವರಿಗೆ (ಎಲ್ಲರೂ ಜೈ ಎಂದರು)

**ಸತ್ ಸಂಪೂರ್ಣ, ಓಂ ತತ್‌ಸತ್**



# ತ್ರಿಮೂರ್ತಿಗಳು

ಒಬ್ಬ ವೈಷ್ಣವನೂ, ಶೈವನೂ ಒಬ್ಬರಿಗೊಬ್ಬರು ಎದುರಾಗುತ್ತಾರೆ. ಅವರಿಬ್ಬರ ಸಿದ್ಧಾಂತಗಳು ಬೇರೆಬೇರೆ ಆಗುವುದೂ, ಅನಾದಿಯಿಂದ ಶೈವ, ವೈಷ್ಣವ ಸಿದ್ಧಾಂತಗಳ ಮಧ್ಯೆ ವಿಬೇಧಗಳು ಇರುವುದರಿಂದ, ಅವರಿಬ್ಬರಿಗೂ ಒಬ್ಬರಿಗೊಬ್ಬರು ಸರಿಹೋಗದೆ ನಮ್ಮ ದೇವರು ದೊಡ್ಡವನೆಂದರೇ, ನಮ್ಮ ದೇವರು ದೊಡ್ಡವನೆಂದು ಈ ವಿಧವಾಗಿ ವಾದಕ್ಕೆ ಇಳಿದಿದ್ದಾರೆ.

## <u>ಸೀನ್‌ನಂ.1</u>

ಅಡ್ಡನಾಮ, ನಿಲುವುನಾಮ ಇಬ್ಬರೂ ಬೇರೊಂದು ಕಡೆಯಿಂದ ಬಂದು ಎದುರಾಗುತ್ತಾರೆ.

**ಅಡ್ಡನಾಮ :–** ಏಲ್ರೈ! ನಿಲುವು ನಾಮವೆ ಬೆಳಗ್ಗೆ ಬೆಳಗ್ಗೆ ನಿನ್ನ ದರಿದ್ರದ ಮುಖ ಕಾಣಿಸಿದೆ. ಈದಿನ ನನ್ನ ಗತಿ ಹೇಗೆ ಇರುತ್ತದೋ; ಏನೋ!

**ನಿಲುವುನಾಮ :–** ನಿತ್ಯ ಅಷ್ಟಾಕ್ಷರಿ ಮಂತ್ರ ನಾಮಸ್ಮರಣೆಯಿಂದ ನಾರಾಯಣನನ್ನು ಮೆಚ್ಚಿಸಿದ ದೊಡ್ಡ ಭಕ್ತರು ನಾವೇ! ನಮ್ಮನ್ನು ನೀನು ಅವಹೇಳನೆ ಮಾಡುತ್ತೀಯಾ ಮೂರ್ಖ!

**ಅಡ್ಡನಾಮ :–** ನಿಮ್ಮ ಅಷ್ಟಾಕ್ಷರಿಗಿಂತ ಮೊದಲು ಹುಟ್ಟಿದ ಪಂಚಾಕ್ಷರಿ ಮಂತ್ರವನ್ನೇ

ಜಪಿಸಿದ ಆದಿಪೀಠ ವಾರಸರು. ಪಂಚಾಕ್ಷರಿ ಮಂತ್ರದಿಂದ ಪರಮಶಿವನನ್ನೇ ಮೆಚ್ಚಿಸುವಂತಹ ನಮ್ಮನ್ನು ಆಕ್ಷೇಪಿಸುತ್ತಿದ್ದೀಯಾ! ನಿಲುವು ನಾಮವೆ!

**ನಿಲುವು ನಾಮ :–** ದಶಾವತಾರಗಳಲ್ಲಿ ಸೃಷ್ಠಿಯನ್ನು ಕಾಪಾಡಿದ ನನ್ನ ವಿಷ್ಣುಮೂರ್ತಿಯೇ ನಿಜವಾದ ದೇವರು. ಮೊದಲು ಆ ವಿಷಯವನ್ನು ತಿಳಿದಿಕೋ!

**ಅಡ್ಡನಾಮ :–** ಆ..ಆ... ಶಿವನ ಆಜ್ಞೆ ಇಲ್ಲದೆ ಇರುವೆ ಕೂಡ ಕಚ್ಚುವುದಿಲ್ಲ ಎನ್ನುತ್ತಾರೆ ತಿಳಿದಿದೆಯಾ? ಅಂದರೆ ಎಲ್ಲ ಕಾರ್ಯಗಳಿಗೂ ಶಿವನೇ ಕಾರಕನು, ಆತನಿಗೆ ತಿಳಿಯದಿರುವುದಂತೂ ಏನೂ ಇಲ್ಲ. ಅಷ್ಟೇ ಅಲ್ಲದೆ, ಲೋಕ ಕ್ಷೇಮಕ್ಕೋಸ್ಕರ ವಿಷವನ್ನು ತನ್ನ ಕೊರಳಲ್ಲಿ ಇಟ್ಟುಕೊಂಡು, ಈ ಲೋಕದಲ್ಲಿನ ಜೀವರಾಶಿಗಳೆಲ್ಲವುಗಳನ್ನು ಕಾಪಾಡಿದ್ದಾನೆ. ಇಲ್ಲದಿದ್ದರೇ ನಿನ್ನ ತಾತ, ನಿನ್ನ ಮುತ್ತಾತ ಎಲ್ಲರೂ ಆದಿಯಲ್ಲಿಯೇ ಇಲ್ಲದಂತೆ ಹೋಗಿ ಈ ದಿನ ನೀನು ಕೂಡಾ ಇಲ್ಲದಂತೆ ಹೋಗುತ್ತಿದ್ದೆ, ಅಂತಹ ಶಿವನನ್ನು ಕುರಿತು ತಿಳಿದುಕೊಂಡು ನೀನೂ ಸಹ ಅಡ್ಡನಾಮಗಳು ಧರಿಸಿಕೋ! ಎಲ್ಲ ಕೋರಿಕೆಗಳು ತೀರಿಸುವ ಸಮರ್ಥನು ನಮ್ಮ ಶಿವನೇ ಅದಕ್ಕೇ ನಿಲುವುನಾಮವನ್ನು ತೆಗಿ... ತೆಗಿ......

**ನಿಲುವುನಾಮ :–** ಮೊದಲು ನೀನು ತೆಗಿ.... ತೆಗಿ ಎಲ್ಲ ಕೋರಿಕೆಗಳು ತೀರಿಸುವ ಸಮರ್ಥನು ನನ್ನ ವಿಷ್ಣುವೇ, ಲೋಕರಕ್ಷಕನು ಕೂಡಾ ನನ್ನ ವಿಷ್ಣುವೇ. ಪೂರ್ವದಲ್ಲಿ ಭಸ್ಮಾಸುರನು ತಪಸ್ಸು ಮಾಡಿದಾಗ ಪ್ರತ್ಯಕ್ಷವಾದ ನಿನ್ನ ಶಿವನು, ಆತನ ಕೋರಿಕೆಯನ್ನು ಈಡೇರಿಸಿ ಪ್ರಾಣಕ್ಕೆ ತಂದುಕೊಂಡಾಗ ನನ್ನ ನಾರಾಯಣನೇ ಮೋಹಿನಿ ಅವತಾರವನ್ನು ತಾಳಿ ನಿನ್ನ ಶಿವನನ್ನು ಕಾಪಾಡಿದ್ದಾನೆ, ನಡೆದ ವಿಷಯ ತಿಳಿದುಕೊಂಡು ಮಾತನಾಡು.

**ಅಡ್ಡನಾಮ :–** ಅರೇ ನಿನಗು, ನನಗು ವಾದ ಬೇಡ ಇದು ನಮ್ಮ ತಾತ, ಮುತ್ತಾತರಿಂದ ಬಂದಿರುವ ಮುಗಿಯದ ಪಂಚಾಯಿತಿ, ಆದ್ದರಿಂದ ಯಾರು ನಿಜವಾದ ದೇವರೋ ಆ ದೇವತೆಗಳನ್ನು ಕೇಳಿ ತಿಳಿದುಕೊಳ್ಳೋಣ.

## ಸೀನ್ ನಂ.2

(ಇಬ್ಬರು, ದೇವರ ಸುಳಿವಿಗಾಗಿ ಅನೇಕ ಸ್ವಾಮೀಜಿಯರನ್ನು ಕೇಳುತ್ತಾ, ದೇಶವೆಲ್ಲಾ ತಿರುಗುತ್ತಾ ಕೊನೆಗೆ ಹಿಮಾಲಯಗಳಿಗೆ ಸೇರಿಕೊಂಡು ಅಲ್ಲಿ ನಿವಾಸವಿದ್ದ ತ್ರಿಮೂರ್ತರನ್ನು ನೋಡುತ್ತಾರೆ.)

**ಅಡ್ಡನಾಮ :–** ಆಹಾ! ಏನು ನನ್ನ ಅದೃಷ್ಟ! ನಾನು ಆರಾಧಿಸುವ ಪರಮಶಿವನು ನನಗೆ ಕಾಣಿಸಿದ್ದಾನಾ? ಇದು ಕನಸಾ? ಅಥವಾ ನಿಜವಾ? ತನ್ನನ್ನು ತಾನು ಚಿವುಟಿಕೊಳ್ಳುತ್ತಾ (ಶಿವ, ಶಿವ, ಶಂಕರ)... ಹಾಡು

**ನಿಲುವುನಾಮ :–** ಓಹೊಹೋ! ಏನು ಅದ್ಭುತ, ಏನು ಅದ್ಭುತ ನನ್ನ ನಾರಾಯಣ ಮೂರ್ತಿಯನ್ನು ನೋಡಿದ ನಾನು, ಎಷ್ಟೋ ಧನ್ಯನೆಂದು ಇಲ್ಲಿಯೂ ಇದ್ದಾನೆ ಅಲ್ಲಿಯೂ ಇದ್ದಾನೆ ಎಲ್ಲೆಲ್ಲಿ ನೋಡಿದರೆ ಅಲ್ಲಲ್ಲಿಯೇ ಇದ್ದಾನೆ ಎನ್ನುತ್ತಾರೆ, ಆದರೆ ಎಲ್ಲೆಲ್ಲಿ ಹುಡುಕುತ್ತಿದ್ದರೇ ಇಲ್ಲಿ ದರ್ಶನಕೊಟ್ಟಿದ್ದೀಯ! ನನ್ನ ತಂದೆ... (ಹಾಡು)

**ಅಡ್ಡನಾಮ :–** ತಂದೆ, ಪರಮಾತ್ಮ, ಶಂಕರಾ! ನಿನ್ನನ್ನು ನೋಡಿದ ಆನಂದದಲ್ಲಿ ಎಲ್ಲಾ ಮೈಮರೆತು ಹೋಗುತ್ತಿದ್ದೇನೆ, ಈ ಆನಂದ ಸಮಯದಲ್ಲಿಯೇ ನನ್ನನ್ನು ನಿನ್ನಲ್ಲಿ ಸೇರಿಸಿಕೊಳ್ಳುತ್ತೀಯಾ ತಂದೆ. ಈ ಜನ್ಮಗಳು ಇನ್ನು ಸಾಕು, ಈ ಬಾಧೆಗಳು ಇನ್ನು ಸಾಕು, ಈ ಚರಾಚರ ಸೃಷ್ಠಿಗೆ ಈಶ್ವರನಾಗಿ ಕರೆಯಲ್ಪಡುತ್ತಿರುವ ನೀನೇ ಅಲ್ಲವೆ ನಿಜವಾದ ದೇವರು. ನಿನ್ನನ್ನು ಕುರಿತು ಎಷ್ಟೋ ಪುರಾಣಗಳಲ್ಲಿ ಕೇಳಿದ್ದೇನೆ. ನಿನ್ನ ಮಹಿಮೆಗಳು ಎಷ್ಟೋ ತಿಳಿದುಕೊಂಡಿದ್ದೇನೆ. ಎಷ್ಟೋ ಜನರ ಕೋರಿಕೆಗಳನ್ನು ಈಡೇರಿಸಿದ ಮಹಾನುಭಾವನು ನೀನೇ ಅಲ್ಲವೆ ನಿಜವಾದ ದೈವ, ನಿಮ್ಮ ನಂತರ ಚರಿತ್ರೆಯಲ್ಲಿ ಹೇಳಿಕೊಳ್ಳುತ್ತಿರುವ ವಿಷ್ಣು ಮೂರ್ತಿಯನ್ನು ಅಸಲಾದ ದೇವರೆಂದು ಈ ನಿಲುವು ನಾಮದವನು ಅನ್ನುತ್ತಿದ್ದಾನೆ, ತಂದೆ ಇವನಿಗೆ ನೀನೇ ಅಸಲು ದೇವರೆಂದು ನೀನಾದರೂ ಹೇಳು.

**ನಿಲುವುನಾಮ :–** ಆ! ಏನಯ್ಯಾ ಅಡ್ಡನಾಮ ಏನು ನಿನ್ನ ಕಥೆ, ನಮ್ಮನ್ನು ದಬಾಯಿಸಿ, ಮುನ್ನುಗ್ಗಿ ಬರುವಂತೆ ಮಾಡುತ್ತಿರುವೆ. ಇದು ನಮ್ಮ ಊರು ಅಲ್ಲ. ನನ್ನ ನಾರಾಯಣನು ನಿವಾಸಿಸುತ್ತಿರುವ ಪ್ರಾಂತ. ಆತನಿಗೆ ಕೋಪ ಬಂದರೇ ಸುದರ್ಶನ ಚಕ್ರದಿಂದ ನಿನ್ನ ತಲೆಯನ್ನು ಖಂಡಿಸುತ್ತಾನೆ. ನನ್ನ ನಾರಾಯಣನೆಂದರೇ ಅಸಲಾದ ದೇವದೇವರು. ಅದಕ್ಕೇ ವೈಕುಂಠನಿವಾಸಿಯಾಗಿ ಹೆಸರುಹೊಂದಿದ್ದಾನೆ. ಮತ್ತು ನಿನ್ನ ಶಿವನು ಸ್ಮಶಾನವಾಸಿ ಆ ಸಂಗತಿ ಕೂಡ ನಿನಗೆ ತಿಳಿದಿದೆಯೋ ಇಲ್ಲವೋ.

**ಶಂಕರನು :–** ನೋಡ್ರಪ್ಪಾ, ಸೃಷ್ಠಿ ಆದಿಯಿಂದ ಕಲಹಗಳು ಇಲ್ಲದ ನಮಗೆ ನೀವೇ ಕಲಹಗಳು ಇಡುವವರಾಗುತ್ತಿದ್ದೀರ. ನೀವಂದುಕೊಂಡಂತೆ ನಾನು ದೇವರು ಅಲ್ಲ, ದೇವತೆ ಮಾತ್ರವೇ. ನಾನೂ ಸಹ ಪರಮಾತ್ಮ ಚಿಹ್ನೆಯಾದ ಈಶ್ವರಲಿಂಗವನ್ನು ಮಾತ್ರವೇ ಆರಾಧಿಸುತ್ತಿದ್ದೇನೆ. ಅದುವೇ ಸೃಷ್ಠಿಕರ್ತನಾದ ದೇವರಿಗೆ ಕಾಣಿಸುವ ಗುರುತು ಆದ್ದರಿಂದ ಸೃಷ್ಠಿ ಆದಿಯಿಂದ ಅನ್ಯಚಿಂತೆ ಇಲ್ಲದಂತೆ ಈಶ್ವರ ಲಿಂಗವನ್ನು ಆರಾಧಿಸುತ್ತಿದ್ದೇನೆ. ಆದ್ದರಿಂದ ಸಾಧಾರಣ ಶಿವನಾದ ನನಗೆ ದೇವತೆ ಹುದ್ದೆ ಸಿಕ್ಕಿದೆ. ಅಷ್ಟೇ ಹೊರತು ನಾನು ಸೃಷ್ಠಿಕರ್ತನು ಅಲ್ಲ. ಅದಕ್ಕೇ ನಾನು ಕೂಡಾ ಮುಕ್ತಿಗೋಸ್ಕರವೇ ಬ್ರಹ್ಮಯೋಗ ಮಾಡುತ್ತಿದ್ದೇನೆ.

**ಅಡ್ಡನಾಮ :–** ಏನೂ! ನೀನು ಈಶ್ವರಲಿಂಗವನ್ನು ಪೂಜಿಸುತ್ತಿದ್ದೀಯಾ! ಅಂದರೇ ನೀನು ಬೇರೆ, ಈಶ್ವರಲಿಂಗ ಬೇರೆನಾ? ನೀನೇ ಸೃಷ್ಠಿಕರ್ತ ಎಂದು ಎಷ್ಟೋ ಭಕ್ತಿ ಶ್ರದ್ಧೆಗಳಿಂದ ಪೂಜಿಸಿದ್ದೇನೆ. ಎಷ್ಟೋ ಮೌನವ್ರತಗಳನ್ನು ಮಾಡಿದ್ದೇನೆ, ಎಷ್ಟೋ ಧನವನ್ನು, ಕಾಲವನ್ನು ವೃಥಾ ಮಾಡಿದ್ದೇನೆ. ಕಣ್ಣು ಮುಚ್ಚಿಕೊಂಡು ಎಷ್ಟೋ ದಿನಗಳು ನಿನಗೋಸ್ಕರ ತಪಸ್ಸು ಮಾಡಿದ್ದೇನೆ. ಮತ್ತೆ ನೀನು ಅರ್ಧ ಕಣ್ಣು ತೆರೆದು ಯೋಗ ಮಾಡುತ್ತಿದ್ದೀಯ, ನೀನು ಯಾವ ಯೋಗ ಮಾಡುತ್ತಿದ್ದೀಯೋ ನನಗೆ ಸ್ವಲ್ಪ ಕೂಡ ತಿಳಿಯುತ್ತಿಲ್ಲ ಶಂಕರಾ...

**ಶಂಕರನು :–** ಹೌದು ತಂದೆ ನಾನೂ ಸಹ ಎಷ್ಟೋ ಯುಗಗಳಿಂದ ಕಣ್ಣು ಮುಚ್ಚಿಕೊಂಡು ಯೋಗ ಮಾಡಿದ್ದೇನೆ. ಆದರೇ ಕಲಿಯುಗ ಬಂದನಂತರ

ಅರ್ಧ ಕಣ್ಣು ತೆರೆದುಕೊಂಡು ನೋಡಬೇಕಾದ ಪರಿಸ್ಥಿತಿ ಬಂದಿದೆ. ಏಕೆಂದರೇ ಎಲ್ಲರೂ ಕಳ್ಳರೆ, ಮೋಸಮಾಡುವವರೇ! ದೇವತೆಗಳನ್ನು ದೊಡ್ಡದಾಗಿ ಹೇಳಿಕೊಳ್ಳುತ್ತಾ, ಪೂಜಿಸುತ್ತಾ ಕೂಡ ನಮ್ಮ ಒಡವೆಗಳನ್ನೆ ಕದಿಯುತ್ತಿದ್ದಾರೆ. ಎಷ್ಟೋ ದೇವಾಲಯಗಳಲ್ಲಿ ಆಭರಣಗಳು, ಕಿರೀಟಗಳು, ಹುಂಡಿಯಲ್ಲಿ ಹಣವನ್ನು ಮಾಯ ಮಾಡುತ್ತಿದ್ದಾರೆ. ಕೆಲವು ಆಲಯಗಳಲ್ಲಿ ವಿಗ್ರಹಗಳನ್ನೇ ಕದ್ದು ವಿದೇಶಗಳಲ್ಲಿ ಮಾರಿಕೊಳ್ಳುತ್ತಿದ್ದಾರೆ. ಅದಕ್ಕೇ ನನ್ನ ಮರ್ಯಾದೆ ಹೋಗ ಬಾರದೆಂದು, ನನ್ನ ಆಸ್ತಿ ಆದ ಪಾದರಕ್ಷೆಗಳು, ಕಮಂಡಲ, ಯೋಗದಂಡ, ನನ್ನ ವಾಹನವಾದ ನಂದಿಯನ್ನು ಕಾಪಾಡಿಕೊಳ್ಳುವುದಕ್ಕೆ ಅರ್ಧ ಕಣ್ಣುಗಳಿಂದ ನೋಡುತ್ತಾ, ಆಗಾಗ ಯೋಗ ಬ್ರಷ್ಟನಾಗಿ ದೈವತ್ವವನ್ನು ಸೇರಿಕೊಳ್ಳಲಾರದೆ ನಾನಾ ಪಾಟು ಬೀಳುತ್ತಿದ್ದೇನೆ.

**ನಿಲುವು ನಾಮ :–** ನೋಡಿದ್ದೀಯ, ನೋಡಿದ್ದೀಯಾ ನಿನ್ನ ಶಂಕರನೇ ದೇವರು ಅಲ್ಲ ಎಂದು ಆತನೇ ಸ್ವತಃವಾಗಿ ಹೇಳುತ್ತಿದ್ದಾನೆ. ಈಗಾದರೂ ತಿಳಿದಿದೆಯಾ ನನ್ನ ನಾರಾಯಣನೇ ನಿಜವಾದ ದೇವರು. ಅದಕ್ಕೇ ವಿಭೂತಿ ರೇಖೆಗಳು ತೆಗೆದು, ನಿಲುವುನಾಮವನ್ನು ಧರಿಸಿ ನಮ್ಮ ಸಮಾಜದಲ್ಲಿ ಸೇರಿಕೋ...

**ಬ್ರಹ್ಮ :–** ಎಲೈ! ನೀಚ ಮಾನವರೇ! ಏನು ನಿಮ್ಮ ಅಟ್ಟಹಾಸ? ನಮ್ಮ ಹತ್ತಿರಕ್ಕೆ ಬಂದರೂ ನಿಮ್ಮ ಬುದ್ಧಿಗಳು ಬದಲಾಗಲಿಲ್ಲವೇ? ಭಯ, ಭಕ್ತಿ ಇಲ್ಲದಂತೆ ಮಾತನಾಡುತ್ತಿದ್ದಾರೆ. ರಾಜಕೀಯ ಪಾರ್ಟೀಗಳಂತೆ ವೇಷಗಳು, ಆಚರಣೆಗಳು ಬದಲಾಗೆನ್ನುತ್ತಿದ್ದಾರೆ. ನಿಮಗಿರುವ ಭಕ್ತಿ ನಿಮ್ಮ ಸ್ವಾರ್ಥಕ್ಕೋಸ್ಕರವೇ ಆದರೆ ಜ್ಞಾನ, ಧರ್ಮಕ್ಕೋಸ್ಕರ ಅಲ್ಲ! ಹೋಗ್ರಿ. ಇಲ್ಲಿಂದ ಹೊರಟು ಹೋಗ್ರಿ ಇಲ್ಲದಿದ್ದರೇ ನಾನು ಏನು ಮಾಡುತ್ತೀನೋ.

**ನಿಲುವುನಾಮ :–** ನಾರಾಯಣ! ನಾರಾಯಣ! ನೀನೇ ಕಾಪಾಡು. ಬ್ರಹ್ಮರವರು ನಮ್ಮ ಮೇಲೆಗೆ ಸಿಟ್ಟಿನಿಂದ ಬರುತ್ತಿದ್ದಾರೆ. ನೀನು ನಮ್ಮನ್ನು ಕಾಪಾಡಿರಿ. ನಿನ್ನ ಹುಂಡೀಯಲ್ಲಿ ಎಷ್ಟೋ ಹಣ ಹಾಕಿದ್ದೇನೆ, ನನ್ನವು ನನ್ನ ಕುಟುಂಬ ಸದಸ್ಯರೆಲ್ಲರವು

ತಲೆ ಕೂದಲುಗಳನ್ನು ಸಮರ್ಪಿಸಿದ್ದೇವೆ. ನಿನ್ನ ಪುಣ್ಯ ಕ್ಷೇತ್ರಗಳು ಎಲ್ಲ ದರ್ಶಿಸಿದ್ದೇನೆ, ನನ್ನನ್ನು ಕಾಪಾಡು ಸ್ವಾಮೀ.

**ವಿಷ್ಣು :–** ಏನೋ! ಪುಣ್ಯಕ್ಷೇತ್ರಗಳು ತಿರುಗಿದ್ದೀಯಾ? ಅಂದರೇ ಸ್ಥಳಗಳು ಎಲ್ಲಾದರೂ ಪುಣ್ಯ ಮಾಡಿರುವವು, ಪಾಪ ಮಾಡಿರುವವು ಇರುತ್ತವಾ? ಮನುಷ್ಯನೇ ಪಾಪಗಳು, ಪುಣ್ಯಗಳು ಮಾಡುತ್ತಿರುತ್ತಾನೆ. ನೀನು ಅಲೆದಿರುವವೆಲ್ಲಾ ದೇವತಾ ಪ್ರಾಂಗಣಗಳು, ನಿಜವಾದ ದೇವರ ಆಲಯ ದೇಹವೇ. ಪುಣ್ಯಕ್ಷೇತ್ರಗಳು ಎನ್ನುವ ಪದವನ್ನು ಕಟ್ಟಡಗಳಿಗೆ, ಸ್ಥಳಗಳಿಗೆ ಬಳಸಬಾರದು. ಇನ್ನೂ ಏನು ಹೇಳಿದೆ? ಹುಂಡಿಯಲ್ಲಿ ಹಣ ಹಾಕಿದ್ದೀಯಾ? ಅವು ಎಂದಾದರೂ ನಾನು ಒಂದು ರೂಪಾಯನ್ನು ಖರ್ಚು ಮಾಡಿದ್ದೀನಾ? ಅವು ನನ್ನ ಬಳಿಗೆ ಬಂದಿವೆಯಾ? ನನಗೆ 100/– ಹುಂಡಿಯಲ್ಲಿ ಹಾಕಿ ಲಕ್ಷರೂಪಾಯಿಗಳು ಕೋರುತ್ತಿದ್ದಾರೆ.

ಇನ್ನೂ ಏನು ಹೇಳಿದ್ದೀಯ. ನೀನು, ನಿನ್ನ ಕುಟುಂಬ ಸದಸ್ಯರೆಲ್ಲರೂ ನಿಮ್ಮ ತಲೆ ಕೂದಲನ್ನು ಸಮರ್ಪಿಸಿದ್ದೀರಾ? ತಲೆಮೇಲೆ ಸರುಕೇ ಅಲ್ಲವೆ ಒಟ್ನಲ್ಲಿ ಸೋವಿಯೇ ಅಲ್ಲವೆ ಎಂದು ಹೇಳಿದಂತೆ ಸುಮ್ಮನೆ ಬೆಳೆದ ಕೂದಲುಗಳನ್ನು ನಮಗೆ ಮುಡುಪಾಗಿ ಕೊಡುತ್ತಿದ್ದೀರ. ನಾವು ಏನಾದರೂ ಚೌರಿ ವ್ಯಾಪಾರ ಮಾಡುತ್ತಿದ್ದೇವಾ, ಅಸಲು ತಲೆಕೂದಲು ಏಕೆ ಸಮರ್ಪಿ ಸುತ್ತಿದ್ದಾರೋ ತಿಳಿದಿದೆಯಾ ನಿಮಗೆ?

**ಶಂಕರನು :–** ಅವರಿಗೆ ಅಂತಹ ಜ್ಞಾನ ವಿಷಯಗಳ ಮೇಲೆ ಆಸಕ್ತಿ ಏಕೆ ಇರುತ್ತದೆ? ಕೇವಲ ಕೋರಿಕೆಗಳ ಮೇಲೆಯೇ ಧ್ಯಾಸವೆಲ್ಲವೂ ಇರುತ್ತದೆ. ಮೊನ್ನೆ ನನ್ನ ಆಲಯಕ್ಕೆ ಬಂದಿರುವವರು ಕೆಲವರಲ್ಲಿ ಒಬ್ಬನು ನಮ್ಮ ಬಾವಮೈದನನನ್ನು ನೀನು ಸಾಯಿಸಿದರೇ ನಮ್ಮ ಅತ್ತೆಯವರ ಆಸ್ತಿ ಎಲ್ಲ ನನಗೆ ಬರುತ್ತದೆ. ಹಾಗೆ ಮಾಡಿದರೇ ನನ್ನ ಕೂದಲು ಕೊಡುತ್ತೇನೆನ್ನುತ್ತಾನೆ. ಇನ್ನೊಬ್ಬ ವಿದ್ಯಾರ್ಥಿ ಪರೀಕ್ಷೆಗಳು ಸಮೀಪಿಸಿದರೂ ಓದುವುದಿಲ್ಲ. ಆಟ, ನೋಟ, ಹುಡುಗಿಯರೊಂದಿಗೆ

ಷಿಕಾರುಗಳು ಮಾಡಿದವನಿಗೆ ಆ ಪರೀಕ್ಷೆಗಳೆಲ್ಲವುಗಳಲ್ಲಿ ನನ್ನನ್ನು ಉತ್ತೀರ್ಣನನ್ನಾಗಿ ಮಾಡಿದರೇ, ನನ್ನ ಗುಡಿಗೆ ಬಂದು ತಲೆ ಬೋಳು ಮಾಡಿಸಿಕೊಳ್ಳುತ್ತೇನೆ ಎನ್ನುತ್ತಾನೆ. ಇನ್ನೊಬ್ಬನು ಉದ್ಯೋಗದಲ್ಲಿ ಸೇರಿದ ಕೆಲವು ದಿನಗಳಿಗೇ ಅವರ ಮೇಲಧಿಕಾರಿಗಳನ್ನೆಲ್ಲ ಶಾಸಿಸುವ ದೊಡ್ಡ ಹುದ್ದೆ ಕಲ್ಪಿಸಿದರೆ, ತಲೆ ಕೂದಲು ಅರ್ಪಿಸುತ್ತೇನೆನ್ನುತ್ತಾನೆ. ಇನ್ನೊಬ್ಬ ರಾಜಕೀಯ ನಾಯಕನು ಗೆದ್ದ ಮೊದಲನೆ ಸಲವೇ ದೊಡ್ಡ ಮಂತ್ರಿ ಆಗಬೇಕೆನ್ನುತ್ತಾನೆ. ಇವರೆಲ್ಲರ ಕೋರಿಕೆಗಳನ್ನು ಈಡೇರಿಸಿದರೇ, ನನಗೆ ಅವರ ತಲೆ ಕೂದಲು ಕೊಡುತ್ತಾರಂತೆ. ಹೀಗೆ ಏಕೆ ತಯಾರಾಗಿದ್ದೇವೆ, ಅಸಲು ಜ್ಞಾನ ಎಂದರೆ ಏನು? ಜೀವಿಯು ಯಾರು? ದೇವರು ಯಾರು? ಎಂದು ಯಾವಾಗಾದರೂ ಆಲೋಚಿಸಿದ್ದೀರಾ? ನೀವು ಹೋಗಿ ಮೊದಲು ಜ್ಞಾನ ತಿಳಿದುಕೊಳ್ಳಿ.

**ಅಡ್ಡನಾಮ :–** ಸ್ವಾಮೀ! ನೀವು ಸಹ ಹಾಗೆ ಕೋಪಿಸಿಕೊಂಡು ಹೋಗೆಂದರೇ ಹೇಗೆ ತಂದೆ. ನಮಗೆ ಊಹೆ ತಿಳಿದಾಗಿನಿಂದ ನಿಮ್ಮನ್ನು ನಿಜವಾದ ದೇವರಾಗಿ ಭಾವಿಸುತ್ತಿದ್ದೇವೆ, ಒಂದೇ ಬಾರಿ ನಮ್ಮನ್ನು ದೂರ ತಳ್ಳದೆ, ವಾಸ್ತವ ವಿಷಯಗಳನ್ನು ತಿಳಿಸಿರಿ, ನಿಜವಾದ ದೈವವನ್ನು ತಿಳಿಸಿರಿ.

**ವಿಷ್ಣು :–** ನೋಡ್ರಪ್ಪಾ! ನಾವು ದೇವತೆಗಳು ಮಾತ್ರವೇ, ನಿಮಗು ನಮಗು ಸೃಷ್ಠಿ ಎಲ್ಲದಕ್ಕೂ ಅಧಿಪತಿ ಒಬ್ಬ ಪರಮಾತ್ಮನೇ. ಎಲ್ಲರೂ ಆತನ ಮಕ್ಕಳೇ ಆದ್ದರಿಂದ ನೀವು ಕೂಡ ಆತನ ಜ್ಞಾನವನ್ನು ತಿಳಿದುಕೊಂಡು ಆಚರಿಸಿದರೇ ನೀವು ಕೂಡ ಯೋಗಿಗಳಾಗಿ ತಯಾರಾಗುತ್ತೀರಾ. ಯೋಗಿಗಳು ದೇವತೆಗಳಿಗಿಂತ ಅಧಿಕರು. ಪೂರ್ವದಲ್ಲಿ ದುರ್ವಾಸನೆನ್ನುವ ಯೋಗಿ ನನ್ನನ್ನು ಕೋಪದಿಂದ ಕಾಲಿನಿಂದ ಹೊಡೆದರೇ, ಆತನ ಮುಂದೆ ನನ್ನ ಶಕ್ತಿ ಸಾಲದೆ ಏನೂ ಮಾಡಲಾರದೆ ಹೋಗಿದ್ದೇನೆ. ಅಂದರೇ ಮನುಷ್ಯರು ಕೂಡ ಜ್ಞಾನವನ್ನು ತಿಳಿದು ಆಚರಿಸಿದರೇ ಯೋಗಿಗಳಾಗಿ ದೈವತ್ವವನ್ನು ಹೊಂದುತ್ತಾರೆ.

**ನಿಲುವುನಾಮ :–** ಅಂತಹ ನಿಜವಾದ ಜ್ಞಾನ ವಿವರ ತಿಳಿಯಬೇಕೆಂದರೇ ಏನು ಮಾಡಬೇಕು? ಎಲ್ಲಿಗೆ ಹೋಗಬೇಕು? ಸ್ವಾಮೀ ಸ್ವಲ್ಪ ನಮಗೆ ತಿಳಿಸಿರಿ.

**ಶಂಕರನು :–** ನಾವು ಹೇಳಿದರೇ ಸ್ವಾರ್ಥದಿಂದ ಹೇಳಿದ್ದಾನೆಂದುಕೊಳ್ಳುತ್ತಾರೆ. ಬ್ರಹ್ಮ ರವರಿಗೆ ಭೂಲೋಕದಲ್ಲಿ ಗುಡಿ ಇಲ್ಲ ಭಕ್ತರು ಇಲ್ಲ ಆದ್ದರಿಂದ ಆತನನ್ನೇ ಕೇಳಿರಿ, ನಿಸ್ವಾರ್ಥದಿಂದ ಹೇಳುತ್ತಾನೆ.

**ಅಡ್ಡನಾಮ :–** ಸ್ವಾಮಿ ಬ್ರಹ್ಮರವರೆ, ನೀವು ಅನುಸರಿಸುತ್ತಿರುವ ಜ್ಞಾನ ವಿಷಯುಗಳನ್ನು ಕುರಿತು ಹೇಳಿ ನಾವು ನಿಜವಾದ ಮಾರ್ಗವನ್ನು ತಿಳಿದುಕೊಳ್ಳುವಂತೆ ಮಾಡಿ ತಂದೆ.

**ಬ್ರಹ್ಮ :–** ಪ್ರಿಯ ಭಕ್ತರೆ! ನಿಮ್ಮ ಅಜ್ಞಾನಕ್ಕೆ ಒಂದು ಕಡೆ ದಯೆ, ಒಂದು ಕಡೆ ಕೋಪ ಉಂಟಾಗುತ್ತಿವೆ. ಅಜ್ಞಾನವೇ ಎಲ್ಲ ಅನರ್ಥಗಳಿಗು ಕಾರಣವೆಂದು ನಿಮ್ಮನ್ನು ನೋಡಿ ತಿಳಿಯುತ್ತಿದೆ. ದೇವರಿಗು, ದೇವತೆಗಳಿಗು ವ್ಯತ್ಯಾಸ ತಿಳಿಯದೆ, ಯಾರು ದೇವರೋ, ಯಾರು ದೇವತೆಗಳೋ ತಿಳಿಯದ ಅಯೋಮಯದಲ್ಲಿ ಬಿದ್ದು, ನೀವು ಸೃಷ್ಠಿಸಿಕೊಂಡ ಮತಗಳಲ್ಲಿ ಮುಳುಗಿ, ಇಹದಲ್ಲಿಯೇ ಇದ್ದುಹೋ ಗುತ್ತಿದ್ದಾರೆ. ನೀವು ಎಂತಹ ಅಜ್ಞಾನಾಂಧಕಾರದಲ್ಲಿ ಇದ್ದೀರೆಂದರೇ, ಈ ಸಕಲ ಸೃಷ್ಠಿಯನ್ನೂ ಬ್ರಹ್ಮ ಎನ್ನುವ ಹೆಸರು ಇರುವ ನಾನು ತಯಾರು ಮಾಡಿದ್ದೇನೆಂದು ಮೂಢ ನಂಬಿಕೆಯಿಂದ ಇದ್ದೀರ.

ವಾಸ್ತವಕ್ಕೆ ಈ ಸರ್ವಸೃಷ್ಠಿಯನ್ನು ತಯಾರು ಮಾಡಿದವನೇ ದೇವರು. ಸೃಷ್ಠಿಕರ್ತ! ಪರಮಾತ್ಮ, ಅಧಿಪತಿ, ಆದಿಕರ್ತ ಎನ್ನುವ ಪದಗಳೆಲ್ಲವೂ ದೈವಕ್ಕೆ ಪರ್ಯಾಯಪದಗಳೇ! ದೇವರು ಸೃಷ್ಠಿಸಿದ ಸಕಲ ಜೀವರಾಶಿಯಲ್ಲಿ ಒಂದಾದ ಮಾನವ ಜಾತಿ ಎರಡು ವಿಧಗಳಾಗಿ ವಿಭಜಿಸಲ್ಪಟ್ಟಿದೆ. ಅವುಗಳೇ ದೇವಜಾತಿ, ರಾಕ್ಷಸ ಜಾತಿ. ಜ್ಞಾನವಿರುವವರು ಈ ಎರಡನ್ನೂ ಗುರುತಿಸಬಹುದು. ಮತ್ತು ತಾನು ಯಾವ ಜಾತಿಯವನಾಗಿರುವುದೂ ಗುರುತಿಸಬಹುದು.

ಭಗವದ್ಗೀತೆಯಲ್ಲಿ "ದೈವಾಸುರ ಸಂಪದ್ವಿಭಾಗ ಯೋಗ" ಎನ್ನುವ ಅಧ್ಯಾಯದಲ್ಲಿ ಭಗವಂತನು, ದೇವತೆಗಳ, ರಾಕ್ಷಸರೊಂದರ ಗುಣಗಳನ್ನು ಹೇಳಿದ್ದಾನೆ. ಅದರ ಆಧಾರವಾಗಿ ದೈವಜ್ಞಾನ ತಿಳಿದವರು ದೇವತೆಗಳೆಂದೂ,

ಅಜ್ಞಾನ ಹೊಂದಿದವರು ರಾಕ್ಷಸರೆಂದೂ ಹೇಳಬಹುದು. ಅಷ್ಟೇ ಅಲ್ಲದೆ ತಿಳಿದುಕೊಂಡ ಜ್ಞಾನ ಪರಿಮಾಣವನ್ನು ಅನುಸರಿಸಿ ದೇವತೆಗಳಿಗೆ ಕೆಲವು ಹುದ್ದೆಗಳು ಕೊಡಲ್ಪಟ್ಟಿವೆ. ಅವುಗಳೇ ವಿಷ್ಣು, ಈಶ್ವರ, ಬ್ರಹ್ಮಸ್ಥಾನಗಳು ಅಥವಾ ಪದವಿಗಳ ಹುದ್ದೆಗಳು. ಅತ್ಯಧಿಕ ಜ್ಞಾನಶಕ್ತಿ ಇರುವವನನ್ನು ವಿಷ್ಣು ಎಂದೂ, ಅಲ್ಲಿಂದ ಜ್ಞಾನಶಕ್ತಿ ಕಡಿಮೆಯಾಗುತ್ತಿದ್ದಂತೆ ಈಶ್ವರ, ಬ್ರಹ್ಮ ಮುಂತಾದ ದಿಕ್ಪಾಲರವರೆಗು ಇದ್ದಾರೆ.

ಮಾನವರಲ್ಲಿಯೇ ದೇವತೆಗಳು ಇದ್ದರೂ, ಅವರನ್ನು ಭೂಮಿಮೇಲೆ ಏಕೆ ಗುರುತಿಸಲಾರದೆ ಹೋಗುತ್ತಿದ್ದಾರೆನ್ನುವ ಪ್ರಶ್ನೆ ನಿಮಗೆ ಬರುತ್ತದೆ. ಅದಕ್ಕೆ ಸಮಾಧಾನವಾಗಿ ಗೀತೆಯಲ್ಲಿ ಭಗವಂತನು ಹೇಳಿದಂತೆ, ದೇವತೆಗಳು ಎಲ್ಲರೂ ಭೂಮಿಮೇಲೆಯೇ ಇದ್ದಾರೆ. ಆದರೆ ಅಜ್ಞಾನಿಗಳು ಅವರನ್ನು ಗುರಿತಿಸಲಾರರು. ಏಕೆಂದರೇ ನಮಗಿರುವ ಸ್ಥೂಲ ಕಣ್ಣುಗಳಿಂದ ನೋಡಿದರೆ, ಎಲ್ಲಾ ಮಾನವಾಕಾರಗಳೇ ಕಾಣಿಸುತ್ತವೆ. ಮಾನವರಲ್ಲಿರುವ ದೈವತ್ವವನ್ನು ಗುರುತಿಸಬೇಕೆಂದರೇ ಜ್ಞಾನದೃಷ್ಠಿ ಬೇಕು. ಈ ಜ್ಞಾನದೃಷ್ಠಿ ಇಲ್ಲದಿದ್ದರೇ ದೇವರಿಗೂ, ದೇವತೆಗಳಿಗೂ ವ್ಯತ್ಯಾಸ ತಿಳಿಯದೆ ಕಾಣಿಸುವ ಪ್ರತಿಯೊಂದು ದೈವವೇ ಎಂದುಕೊಳ್ಳುವ ಪ್ರಮಾದವಿದೆ.

ಪ್ರಸ್ತುತ ನಿಮ್ಮ ಪರಿಸ್ಥಿತಿ ಅದೇ! ವಿಷ್ಣು, ಈಶ್ವರ, ಬ್ರಹ್ಮಗಳೆನ್ನುವವು ಜ್ಞಾನಶಕ್ತಿಯನ್ನು ಅನುಸರಿಸಿ ಪದವಿಗಳೆಂದು, ಆ ಪದವಿಗಳು ಖಾಲಿ ಆಗುತ್ತಲೇ, ಅಂದರೇ ಆಯಾ ಪದವಿಗಳಲ್ಲಿ ಇರುವವರು ಮೋಕ್ಷಕ್ಕೆ ಸೇರಿಕೊಂಡ ಕೂಡಲೇ, ಆ ಪದವಿಗೆ ಅರ್ಹರಾದ ಜ್ಞಾನಶಕ್ತಿಪರರು ಭರ್ತಿ ಆಗುತ್ತಾರೆಂದು ನೀವು ತಿಳಿದುಕೊಳ್ಳಬೇಕಾದ ಅವಶ್ಯವಿದೆ. ಇದೆಲ್ಲವೂ ತಿಳಿಯಬೇಕೆಂದರೇ ದೇವರು ಭೂಮಿಮೇಲೆ ಬಂದು ಹೇಳಿದ ನಿಜವಾದ ಬೋಧನೆಯನ್ನು ತಿಳಿಯಬೇಕು.

ದುರದೃಷ್ಟವಶಾತ್ತೂ, ಈ ದಿನ ಮಾಯಾಪ್ರಭಾವದಿಂದ ಭೂಮಿಮೇಲೆ ಸ್ವಲ್ಪ ಮಂದಿ ಮಾಯಾಗುರುಗಳು, ಪೀಠಾಧಿಪತಿಗಳು, ಸ್ವಾಮೀಜಿಗಳು ದೇವತೆಗಳನ್ನೇ ದೇವರಾಗಿ ಚಿತ್ರಿಸಿ, ತಮ್ಮ ಅಜ್ಞಾನದ ಬೋಧನೆಗಳೊಂದಿಗೆ

ನಿಮ್ಮಂತಹವರನ್ನು ಮತ್ತಷ್ಟು ಅಂಧಕಾರದೊಳಗೆ ತಳ್ಳಿ, ದೈವಮಾರ್ಗದಿಂದ ದೂರ ಮಾಡುತ್ತಿದ್ದಾರೆ. ಅಷ್ಟೇ ಅಲ್ಲದೆ ತಮ್ಮ ಇರುವಿಕೆಯನ್ನು, ತಾವು ಸೃಷ್ಠಿಸಿದ ಮತವೊಂದರ ಮನುಗಡೆಯನ್ನು ಕಾಪಾಡಿಕೊಳ್ಳುವುದಕ್ಕೆ ಶೈವ, ವೈಷ್ಣವ ಎನ್ನುವ ಬೇಧಗಳನ್ನು ಸೃಷ್ಠಿಸಿ, ಮನುಷ್ಯರ ಮಧ್ಯ ವಿಬೇದಗಳು, ವಿದ್ವೇಷಗಳು ಹೆಚ್ಚಿಸಿ ಇಗೋ! ನಿಮ್ಮನ್ನು ಈ ಸ್ಥಿತಿಗೆ ತಂದಿದ್ದಾರೆ.

(ನಿಲುವು ನಾಮಗಳ ಕಡೆ ತಿರುಗಿ) ಏನಯ್ಯಾ! ನಿಲುವು ನಾಮಗಳೆ ಈ ವಿಷ್ಣು ತನ್ನನ್ನು ಹೊರತು ಮತ್ಯಾರನ್ನೂ ಪೂಜಿಸಬೇಡವೆಂದು ನಿನ್ನ ಪೂರ್ವಿಕರಿಗಾಗಲೀ, ನಿನಗಾಗಲೀ ಹೇಳಿದ್ದಾನಾ?

**ನಿಲುವು ನಾಮ :–** ಇಲ್ಲ ಸ್ವಾಮಿ?

**ಬ್ರಹ್ಮ :–** (ಅಡ್ಡನಾಮಗಳ ಕಡೆ ತಿರುಗಿ) ಏನಯ್ಯಾ ಅಡ್ಡನಾಮಗಳೆ, ಈ ಶಿವನಾದರೂ ನಿನಗೆ, ತನ್ನನ್ನೇ ಪೂಜಿಸಬೇಕೆಂದು ಹೇಳಿದ್ದಾನಾ? ಬೇರೇ ದೇವತೆಗಳನ್ನು ಆಶ್ರಯಿಸಬೇಡವೆಂದು ಹೇಳುವುದು ನಡೆದಿದೆಯಾ?

**ಅಡ್ಡನಾಮ :–** ಅಂಥಾದ್ದು ಏನೂ ಇಲ್ಲ ಸ್ವಾಮೀ!

ದೈವಜ್ಞಾನ ತಿಳಿದವರ ಮಧ್ಯೆ ಶರೀರ ಸಂಬಂಧಕ್ಕಿಂತ, ದೊಡ್ಡದಾದ ಆತ್ಮ ಸಂಬಂಧವಿರುತ್ತದೆ. ನಮ್ಮ ಮೂವರಿಗೂ ಮಧ್ಯ ಅಂತಹ ಆತ್ಮ ಸಂಬಂಧವೇ ಇದ್ದು ನಾವು ಒಗ್ಗಟ್ಟಾಗಿದ್ದು, ದೈವಜ್ಞಾನವನ್ನು ಬೆಳಸಿಕೊಳ್ಳುತ್ತಾ ದೈವವನ್ನು ಸೇರಬೇಕೆನ್ನುವ ಆತುರದಲ್ಲಿ ಇದ್ದೇವೆ. ಆದರೇ ನೀವು ನಮ್ಮ ಹೆಸರುಗಳು ಹೇಳಿಕೊಂಡು ಕಲಹಕ್ಕೆ ಇಳಿಯುತ್ತಿದ್ದೀರ. ನಮಗೆ ಇಲ್ಲದ ವಿಬೇಧಗಳು ನಿಮಗೇಕೆ?

ನಾನೂ ಸಹ ಒಂದು ಸಮಯದಲ್ಲಿ ನಿಮ್ಮಂತಹ ಸಾಧಾರಣ ಮಾನವನೇ! ಆದರೇ ನಿಜವಾದ ದೈವಜ್ಞಾನವನ್ನು ತಿಳಿದುಕೊಂಡು, ಆಚರಿಸಿ ಇಗೋ! ಈ ದಿನ ಈ ಬ್ರಹ್ಮಸ್ಥಾನವನ್ನು ಹೊಂದಿ, ದೇವತೆಗಳಾದ ವಿಷ್ಣು,

ಈಶ್ವರರ ಬಳಿ ನಿಂತಿದ್ದೇನೆ. ನಿಜವಾದ ದೈವವನ್ನು ಸೇರಿ, ಮೋಕ್ಷವನ್ನು ಹೊಂದಬೇಕೆಂದು ನಾವೆಲ್ಲಾ ತಪಿಸುತ್ತಿದ್ದೇವೋ, ನೀವೂ ಹಾಗೇ ತಪಿಸಿರಿ. ಅದಕ್ಕೆ ಅವಶ್ಯವಾದ ಸಂಪೂರ್ಣ ದೈವಜ್ಞಾನವನ್ನು ತಿಳಿಯಿರಿ. ಈ ಕಲಹಗಳು ಬಿಡ್ರಿ.

**ಭಕ್ತರು :–** ಸ್ವಾಮೀ! ಅಂತಹ ಬೆಲೆಯುಳ್ಳ ಜ್ಞಾನ ಈ ಮಾಯೆ ಪ್ರಪಂಚದಲ್ಲಿ ಎಲ್ಲಿ ಲಭಿಸುತ್ತದೆ.

**ಬ್ರಹ್ಮ :–** ಸಂತೋಷ ಕಣ್ರಪ್ಪಾ! ನೀವು ಕೇಳಿದ ಪ್ರಶ್ನೆಯನ್ನು ಅನುಸರಿಸಿ, ನಿಮಗೆ ಜ್ಞಾನೋದಯವಾಗಿದೆಯೆಂದು ತಿಳಿಯುತ್ತಿದೆ. ಇನ್ನು ನಿಮ್ಮ ಪ್ರಶ್ನೆಗೆ ಉತ್ತರ ಏನೆಂದರೇ! ನಾವು ಹೇಳಿರುವುದು, ಆಚರಿಸಿರುವುದು ಆದ ದೈವಜ್ಞಾನ, ಈ ದಿನ ಅದೃಷ್ಟವಶಾತ್ತು ಈ ಭೂಮಿಮೇಲೆಯೇ ಲಭಿಸುತ್ತದೆ.

**ಭಕ್ತರು :–** ಎಲ್ಲಿ ಸ್ವಾಮೀ! ಬೇಗನೇ ತಿಳಿಸಿರಿ!

**ಬ್ರಹ್ಮ :–** ಚಿನ್ನಪೊಡಮಲ ಗ್ರಾಮದಲ್ಲಿ ಪ್ರಬೋಧಾಶ್ರಮದಲ್ಲಿ ಶ್ರೀಕೃಷ್ಣನ ನಿಜವಾದ ಬೋಧನೆಯಾದ ತ್ರೈತಸಿದ್ಧಾಂತ ಭಗವದ್ಗೀತೆ ಜ್ಞಾನಸಂದೇಶವನ್ನು **ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು** ನಿರ್ವಿರಾಮವಾಗಿ ತಿಳಿಸುತ್ತಿದ್ದಾರೆ. ಅಂದಹಾಗೆ ಮತ್ತೊಂದು ವಿಷಯ. ಈ ದಿನ ಶ್ರೀಕೃಷ್ಣಾಷ್ಟಮಿ ಸಂದರ್ಭವಾಗಿ ಯೋಗೀಶ್ವರರ ದಿವ್ಯ ಜ್ಞಾನ ಸಂದೇಶವನ್ನು ತಿಳಿಸುತ್ತಿದ್ದಾರೆ. ನಾವೂ ಅಲ್ಲಿಗೇ ಹೋಗುತ್ತಿದ್ದೇವೆ. ನೀವೂ ಸಹ ನಮ್ಮೊಂದಿಗೆ ಬರಬಹುದು.

**ಭಕ್ತರು :–** ಧನ್ಯರು ಸ್ವಾಮೀ! ಇಷ್ಟು ಕಾಲಕ್ಕೆ ಬೆಲೆಯುಳ್ಳ ಜ್ಞಾನ ಮಾರ್ಗ ಲಭಿಸಿರುವುದಕ್ಕೆ ಎಷ್ಟೋ ಆನಂದವಾಗಿ ಇದೆ. ಇಂದಿನಿಂದ ಯೋಗೀಶ್ವರರ ಜ್ಞಾನವನ್ನು ತಿಳಿದುಕೊಂಡು, ಶೈವ, ವೈಷ್ಣವವೆನ್ನುವ ಮತಗಳಿಗೆ ಅತೀತವಾದ ಜ್ಞಾನವನ್ನು ಪ್ರಪಂಚವೆಲ್ಲಾ ಪ್ರಚಾರ ಮಾಡುತ್ತೇವೆಂದು ಪ್ರತಿಜ್ಞೆ ಮಾಡುತ್ತಿದ್ದೇವೆ.

**ಬ್ರಹ್ಮ :–** ಇಷ್ಟು ದೊಡ್ಡ ಜ್ಞಾನವನ್ನು ತಿಳಿಸಿದ ಆಚಾರ್ಯ ಪ್ರಬೋಧಾನಂದರವರಿಗೆ ನಮಸ್ಕರಿಸುತ್ತಾ

––– ಆಚಾರ್ಯ ಪ್ರಬೋಧಾನಂದ ಯೋಗೀಶ್ವರರಿಗೆ ಜೈ...



# ಯಾರು ಜ್ಞಾನಿ – ಯಾವುದು ಮತ

**(ತೆರೆ ತೆಗೆದಕೂಡಲೇ ಮೊದಲ ದೃಶ್ಯದಲ್ಲಿ)**

ಒಬ್ಬ ಹಿಂದೂ, ಒಬ್ಬ ಕ್ರೈಸ್ತನೂ, ಒಬ್ಬ ಮುಸ್ಲಿಮ್ ಮೂವರು ಸೇರಿ ಪ್ರಯಾಣ ಮಾಡುತ್ತಿರುತ್ತಾರೆ. ಹಿಂದೂ ಗಡ್ಡ ಉದ್ದವಾಗಿ ಬೆಳೆಸಿ ತಲೆ ಕೂದಲು ಮುಡಿಹಾಕಿ, ದೊಡ್ಡ ನಾಮ ಹೊಂದಿರುತ್ತಾನೆ. ಕ್ರೈಸ್ತನು ಬಿಳಿಯ ಉದ್ದನೆಯ ಅಂಗೀ ಹಾಕಿಕೊಂಡು, ಅಂಗೀಮೇಲೆ ಶಿಲುಬೆ ಡಾಲರ್‌ನ್ನು ಕಾಣಿಸುವಂತೆ ಇಟ್ಟುಕೊಂಡಿದ್ದಾನೆ. ಮುಸ್ಲಿಮ್ ಮೊಣಕಾಲ ಕೆಳಗೆ ಜುಬ್ಬಾ ಹಾಕಿಕೊಂಡು, ಹಿಮ್ಮಡಿ ಮೇಲಕ್ಕೆ ಪೈಜಾಮಾ ಧರಿಸಿದ್ದಾನೆ. ಅವರನ್ನು ನೋಡುತ್ತಲೇ ಇಂತಹವನು, ಇಂತಹ ಮತಕ್ಕೆ ಸೇರಿದವನೆಂದು ತಿಳಿಯುತ್ತಿದೆ. ಅವರ ಮೂವರಿಗೂ ನೆಗಡಿ ಆಗಿರುವುದರಿಂದ, ಅವರು ಆಗಾಗ ಸೀನುತ್ತಿದ್ದರು. ಹಿಂದೂ ಸೀನಿದಾಗ “ರಾಮ” ಎನ್ನುತ್ತಿದ್ದನು. ಕ್ರೈಸ್ತನು ಸೀನಿದಾಗ “ಪ್ರಭು” ಎನ್ನುತ್ತಿದ್ದನು. ಹಾಗೆಯೇ ಮುಸ್ಲಿಮ್ ಸೀನಿದಾಗ “ಅಲ್ಲಾ” ಎನ್ನುತ್ತಿದ್ದನು. ಅವರು ಹಾಗೆ ಅನ್ನುವುದನ್ನನುಸರಿಸಿ ಮೂವರು ಮೂರು ಮತಗಳಿಗೆ ಸೇರಿದವರೆಂದು ತಿಳಿಯುತ್ತಿದೆ. ಅವರು ಮೂವರು ಒಂದು ಕಡೆ ಕುಳಿತುಕೊಂಡು ಪ್ರಾಶಾಂತವಾಗಿ ಮಾತನಾಡಿಕೊಳ್ಳುತ್ತಿದ್ದಾರೆ.

**ಹಿಂದೂ :–** ನಮ್ಮ ಮೂವರಿಗು ನೆಗಡಿ ಆಗಿದೆ. ಮೂವರಿಗೂ ಸೀನುಗಳು ಬರುತ್ತಿವೆ. ನಾನು ಸೀನಿದಾಗ ರಾಮ ಎನ್ನುತ್ತಿದ್ದೇನೆ. ನೀವು ಇಬ್ಬರು ಮೊದಲು ಹಿಂದೂಮತದಲ್ಲಿದ್ದು, ಇತರ ಮತದೊಳಗೆ ಹೋಗಿದ್ದೀರ. ಮತವೆಂದರೇ ಬದಲಾಯಿಸಿಕೊಂಡಿದ್ದೀರ. ಕೊನೆಗೆ ಸೀನಿದಾಗ ಕೂಡ ದೇವರನ್ನು ಬದಲಾಯಿಸಿ

ಒಬ್ಬರು ಪ್ರಭು ಎಂದು, ಮತ್ತೊಬ್ಬರು ಅಲ್ಲಾ ಎನ್ನುತ್ತಿದ್ದೀರ. ಮತ ಬದಲಾದರೇ ದೇವರನ್ನು ಕೂಡ ಬದಲಾಯಿಸಬಹುದಾ?

**ಮುಸ್ಲಿಮ್ :–** ನಾನು ಮೊದಲು ಹಿಂದೂಮತದಲ್ಲಿದ್ದು ಹಿಂದೂ ಮತಕ್ಕಿಂತ ಇಸ್ಲಾಮ್ ಮತ ದೊಡ್ಡದೆಂದು ಅದನ್ನು ಬಿಟ್ಟು ಬಂದಿದ್ದೇನೆ. ಇಸ್ಲಾಮ್ ಧರ್ಮದ ಪ್ರಕಾರ ನಮಗೆ ದೇವರು ಒಬ್ಬನೇ. ಆದ್ದರಿಂದ ನಾವು ಅಲ್ಲಾ ಎನ್ನುತ್ತಿದ್ದೇವೆ.

**ಕ್ರೈಸ್ತನು :–** ನಾನೂ ಸಹ ಮೊದಲು ಹಿಂದೂಮತದಲ್ಲಿನವನೇ. ಆ ಮತದಲ್ಲಿ 33 ಕೋಟಿ ಮಂದಿ ದೇವತೆಗಳಿದ್ದಾರೆ. ಅದರಲ್ಲಿ ಯಾವು ನಿಜವಾದ ದೇವರೋ ಹೇಳುವುದಕ್ಕೆ ಸಾಧ್ಯವಿಲ್ಲ. ಕ್ರೈಸ್ತವದಲ್ಲಿ ಪ್ರಭುವನ್ನು ಮೀರಿದ ದೇವರು ಇಲ್ಲವೆಂದು ತಿಳಿದಿರುವುದರಿಂದ ನಾನು ಕ್ರೈಸ್ತನಾಗಿದ್ದೇನೆ. ಪ್ರಭುವೇ ದೇವರೆಂದು ಎಲ್ಲರಿಗೂ ತಿಳಿಯುವುದಕ್ಕೆ ಸೀನಿದಾಗ ಕೂಡ ಪ್ರಭೂ ಎನ್ನುತ್ತಿದ್ದೇನೆ.

**ಹಿಂದೂ :–** ಒಬ್ಬರಿಗೆ ಅಲ್ಲಾ, ಒಬ್ಬರಿಗೆ ಪ್ರಭು, ನನಗೇನೋ ರಾಮನು, ನಿಮಗಿಂತ ನಾನೇ ಮೇಲು. ತ್ರೇತಾಯುಗದಲ್ಲಿನ ರಾಮನನ್ನು ಹಿಡಿದು ಕೊಂಡಿದ್ದೇನೆ. ನೀವು ಕಲಿಯುಗದಲ್ಲಿನವರನ್ನು ಹಿಡಿದುಕೊಂಡಿದ್ದೀರ. ಕಲಿಯುಗಕ್ಕಿಂತ ಮೊದಲು ನೀವು ಹೇಳುವ ಹೆಸರುಗಳು ಇಲ್ಲ! ಆದ್ದರಿಂದ ಮೊದಲಿನಿಂದ ಇದ್ದ ರಾಮನನ್ನು ಹಿಡಿದುಕೊಂಡ ನಾನೇ ಮೇಲು.

**ಕ್ರೈಸ್ತನು :–** ನಿಮ್ಮ ದೇವರಾದ ರಾಮನು ತ್ರೇತಾಯುಗದಿಂದ ಬಂದಿರುವವನೇ ಅಲ್ಲವೆ! ಅದಕ್ಕು ಮೊದಲು ಕೃತಯುಗದಲ್ಲಿ ಇಲ್ಲ ಅಲ್ಲವೆ! ನೀನು ಕೂಡ ಮಧ್ಯದಲ್ಲಿ ಬಂದಿರುವವನೇ ಅಲ್ಲವೆ! ಹಿಡಿದುಕೊಂಡಿರುವುದು.

**ಹಿಂದೂ :–** ನಮ್ಮ ರಾಮನು ಅವತಾರ ಪುರುಷನು. ಮೊದಲಿನಿಂದಿದ್ದ ವಿಷ್ಣು ರಾಮನಾಗಿ ಹುಟ್ಟಿದ್ದಾನೆ. ಆದ್ದರಿಂದ ನಮ್ಮ ರಾಮನು ಮೊದಲಿನಿಂದ ಇದ್ದವನೇ.

**ಮುಸ್ಲಿಮ್ :–** ಆದರೇ ಮಧ್ಯದಲ್ಲಿ ಬಂದಿರುವ ರಾಮನ ಹೆಸರು ಹೇಳದಂತೆ

ನೇರವಾಗಿ ವಿಷ್ಣು ಹೆಸರನ್ನೇ ನೀವು ಹೇಳಬಹುದಲ್ಲವೆ! ನಿನ್ನ ಮಾತಿನ ಪ್ರಕಾರ ವಿಷ್ಣು ಅವತಾರವೇ ರಾಮನಾದರೇ, ದ್ವಾಪರಯುಗದಲ್ಲಿ ಹುಟ್ಟಿದ ಕೃಷ್ಣನು ಕೂಡ ವಿಷ್ಣು ಅವತಾರವೇ ಅಲ್ಲವೆ! ಹಾಗಿರುವಾಗ ಕೃಷ್ಣನನ ಹೆಸರನ್ನು ನೀವು ಹೇಳದಂತೆ ರಾಮನ ಹೆಸರೇ ಏಕೆ ಹೇಳುತ್ತಿದ್ದೀರ?

**ಹಿಂದೂ :–** ಕೃಷ್ಣನಿಗಿಂತ ರಾಮನ ಅವತಾರ ಮೊದಲು ಇದೆ. ಕೃಷ್ಣನು ದ್ವಾಪರಯುಗದಲ್ಲಿ ಹುಟ್ಟಿದ್ದಾನೆ. ರಾಮನು ಅದಕ್ಕಿಂತ ಮೊದಲ ಯುಗವಾದ ತ್ರೇತಾಯುಗದಲ್ಲಿ ಹುಟ್ಟಿದ್ದಾನೆ. ಆದ್ದರಿಂದ ಹಿಂದೂ ಸಮಾಜವೆಲ್ಲಾ ರಾಮನನ್ನು ದೇವರಾಗಿ ಹೇಳುತ್ತಿದೆ.

**ಕ್ರೈಸ್ತವನು :–** ಹಾಗಾದರೆ ರಾಮನ ಅವತಾರಕ್ಕಿಂತ ಮೊದಲು ಕೃತಯುಗದಲ್ಲಿ ನರಸಿಂಹವತಾರ ಇದೆ ಅಲ್ಲವೆ! ರಾಮನಗಿಂತ ಮೊದಲಿರುವ ನರಸಿಂಹ ಸ್ವಾಮಿಯನ್ನು ದೇವರಾಗಿ ಹೇಳಬಹುದು ಅಲ್ಲವೇ!

**ಹಿಂದೂ :–** ನರಸಿಂಹಸ್ವಾಮಿ ವಿಷ್ಣು ಅವತಾರವೇ, ಆದರೇ ಪ್ರಜೆಗಳಿಗೆ ರಾಮನನ್ನು ದೇವರಾಗಿ ಹೇಳುವುದೇ ಅಭ್ಯಾಸವಾಗಿ ಹೋಗಿದೆ.

**ಮುಸ್ಲಿಮ್ :–** ನಿನಗೆ ನರಸಿಂಹಸ್ವಾಮಿಯನ್ನು ಬಿಟ್ಟು ರಾಮನನ್ನು ದೇವರೆನ್ನುವುದು ಹೇಗೆ ಅಭ್ಯಾಸವಾಗಿ ಹೋಗಿದೆಯೋ, ನಮಗು ಕೂಡ ರಾಮನನ್ನು ಬಿಟ್ಟು ಅಲ್ಲಾನನ್ನು ದೇವರೆನ್ನುವುದು ಅಭ್ಯಾಸವಾಗಿ ಹೋಗಿದೆ. ಏನು ತಪ್ಪಾ?

**ಹಿಂದೂ :–** ಆದರೇ ರಾಮನನ್ನು ದೇವರು ಅಲ್ಲವೆನ್ನುತ್ತೀಯಾ?

**ಮುಸ್ಲಿಮ್ :–** ನಾನು ರಾಮನನ್ನು ದೇವರು ಅಲ್ಲ ಎನ್ನುತ್ತಿಲ್ಲ. ನಿನ್ನ ಅಭ್ಯಾಸದ ಪ್ರಕಾರ ನಿನಗೆ ರಾಮನು ದೇವರೇ, ನನ್ನ ಅಭ್ಯಾಸದ ಪ್ರಕಾರ ನನಗೆ ಅಲ್ಲಾ ದೇವರೇ ಎನ್ನುತ್ತಿದ್ದೇನೆ.

**ಕ್ರೈಸ್ತನು :–** ಸ್ವಚ್ಛವಾದ ದೇವರುಯಾರೋ ತಿಳಿದುಕೋ ಎನ್ನುತ್ತಿದ್ದೇನೆ. ನಮಗೆ ಸ್ವಚ್ಛವಾದ ದೇವರು ಪ್ರಭುವೇ.

**ಹಿಂದೂ :–** ನಿಮಗೆ ಪ್ರಭು ಸ್ವಚ್ಛವಾದ ದೇವರಾದರೇ, ಶಿಲುಬೆ ಮೇಲೆ ಮೊಳೆಗಳು ಹೊಡೆಸಿಕೊಂಡು ರಕ್ತವನ್ನು ಸೋರಿಸಿ ಏಕೆ ಮರಣಿಸಿದ್ದಾನೆ?

**ಕ್ರೈಸ್ತನು :–** ಪಾಪಿಗಳನ್ನು ತನ್ನ ರಕ್ತದಿಂದ ತೊಳೆಯುವುದಕ್ಕೆ ಆತನ ರಕ್ತವನ್ನು ಸೋರಿಸಿದ್ದಾನೆ. ಆತನು ದೇವರಾಗಿರುವುದರಿಂದಲೇ ಹಾಗೆ ಮಾಡಿದ್ದಾನೆ. ಮರಣಿಸಿ ಎದ್ದವನೇ ನಿಜವಾದ ದೇವರು. ಅತನೇ ಪ್ರಭು.

**ಹಿಂದೂ :–** ಆ ದಿನ ಆತನ ರಕ್ತದಿಂದ ಯಾರೂ ತಮ್ಮ ಪಾಪಗಳನ್ನು ತೊಳೆದುಕೊಳ್ಳಲಿಲ್ಲವೇ? ಪ್ರಭುವನ್ನು ಶಿಲುಬೆಗೆ ಹಾಕಿದವರು ಪಾಪ ಮಾಡಿದಂತೇ ಅಲ್ಲವೆ! ಪ್ರಭುವಿನ ಸಾವಿಗೆ ಕಾರಣನಾದ ಯೂದಾ ಪಾಪಿಯೇ ಅಲ್ಲವೆ! ಪ್ರಭು ಶಿಲುಬೆಗೆ ಹಾಕಲ್ಪಟ್ಟ ದಿನ ಹತ್ತಿರದಲ್ಲಿರುವವರೇ ತೊಳೆದುಕೊಳ್ಳಲಿಲ್ಲ. ಉಳಿದವರು ಯಾರು ತೊಳೆದುಕೊಂಡಿದ್ದಾರೆ, ಯಾರ ಪಾಪ ಹೋಗಿದೆ ಹೇಳಬಲ್ಲೆಯಾ?

**ಮುಸ್ಲಿಮ್ :–** ಯೇಸು ಪ್ರಭು ಶಿಲುಬೆ ಮೇಲೆ ಮರಣಿಸಲಿಲ್ಲ. ಮರಣಿಸಿದಂತೆ ನಟಿಸಿದ್ದಾನೆ. ಆತನು ಮರಣಿಸಿದ್ದರೇ ಅಲ್ಲೇ ಕಾವಲಿದ್ದ ಸೈನಿಕನು ಪ್ರಭುವಿನ ಹೊಟ್ಟೆಯಲ್ಲಿ ಇರಿದಾಗ ರಕ್ತ ಸೋರುವುದಿಲ್ಲ ಅಲ್ಲವೆ! ಆದರೇ ರಕ್ತ ಸೋರಿದೆ. ಮರಣಿಸಿದವನಿಗೆ ರಕ್ತ ಗಡ್ಡೆಕಟ್ಟಿ ಹೋಗುತ್ತದೆ. ಮರಣಿಸಿದಂತೆ ನಟಿಸುತ್ತಿರುವ ಪ್ರಭುವನ್ನು ಸೈನಿಕರು ತಪ್ಪಾಗಿ ಅರ್ಥೈಸಿಕೊಂಡು ಮರಣಿಸಿದ್ದಾನೆಂದು ಕೊಂಡಿದ್ದಾರೆ. ನಂತರ ಮೂರನೆ ದಿನ ಸಮಾಧಿಯೊಳಗಿನಿಂದ ಎದ್ದು ಓಡಿಹೋಗಿದ್ದಾನೆ. 40 ದಿನಗಳು ಹೊರಗೆ ತನ್ನ ಭಕ್ತರಿಗೆ ಕಾಣಿಸಿ ನಂತರ ಎಲ್ಲೋ ತಿಳಿಯದಂತೆ ಹೋಗಿದ್ದಾನೆ. ಶಿಲುಬೆ ಮೇಲೆ ಪ್ರಭು ಮರಣಿಸಲಿಲ್ಲ, ಮರಣಿಸಿದಂತೆ ನಟಿಸುತ್ತಿದ್ದಾನೆ, ನಂತರ ಓಡಿಹೋಗಿದ್ದಾನೆ. ಅಂತಹವನು ದೇವರು ಹೇಗೆ ಆಗುತ್ತಾನೆ. ನಮ್ಮ ಅಲ್ಲಾ ಯಾರಿಗೂ ಕಾಣಿಸಲಿಲ್ಲ, ಯಾವ ಮನುಷ್ಯನಿಗೂ ಸಿಗಲಿಲ್ಲ. ಆದ್ದರಿಂದ ನಮ್ಮ ಅಲ್ಲಾನೇ ನಿಜವಾದ ದೇವರು.

**ಹಿಂದೂ :–** ಕಾಣಿಸದವನು ದೇವರು ಹೇಗೆ ಆಗುತ್ತಾನೆ? ನಮ್ಮ ರಾಮನು ಕಾಣಿಸಿದ್ದಾನೆ, ಅವರ ಪ್ರಭು ಕಾಣಿಸಿದ್ದಾನೆ. ನಿಮ್ಮ ಅಲ್ಲಾ ಎಲ್ಲೂ ಕಾಣಿಸಲಿಲ್ಲವೇ!

**ಮುಸ್ಲಿಮ್ :–** ಸರ್ವಲೋಕ ಸೃಷ್ಠಿಕರ್ತ ಆದವನು ನಮ್ಮ ದೇವರು. ನಿಮ್ಮ ದೇವರಿಗೆ ರೂಪವಿದ್ದಂತೆ ನಮ್ಮ ದೇವರಿಗೆ ರೂಪ, ಹೆಸರು ಇರುವುದಿಲ್ಲ.

**ಕ್ರೈಸ್ತನು :–** ನಿಮ್ಮ ದೇವರಿಗೆ ರೂಪ, ಹೆಸರು ಇಲ್ಲ ಎನ್ನುತ್ತಿದ್ದೀಯ. ಹಾಗಾದರೇ ಅಲ್ಲಾ ಎಂದು ಹೆಸರಿಟ್ಟು ಯಾರನ್ನು ಕರೆಯುತ್ತಿದ್ದೀಯ? ಅಷ್ಟೇ ಅಲ್ಲದೆ ನಿಮ್ಮ ಹದೀಸು ಪಂಡಿತರು ದೇವರಿಗೆ 100 ಹೆಸರುಗಳಿವೆಯೆಂದು ಹೇಳುತ್ತಿದ್ದಾರೆ. ಇನ್ನೂ ನಿಮ್ಮ ದೇವರಿಗೆ ದೊಡ್ಡ ಸಿಂಹಾಸನ ಇದೆಯೆಂದು, ದೇವರು ಮೇಲಿನ ಲೋಕದಲ್ಲಿ ಇದ್ದಾನೆಂದು, ಪ್ರಳಯದಲ್ಲಿ ಎಲ್ಲರನ್ನೂ ಸಮಾಧಿಗಳಿಂದ ಎಬ್ಬಿಸುತ್ತಾನೆಂದು, ಆಗ ಪಾಪ ಮಾಡಿದವನನ್ನು ನರಕಕ್ಕೆ, ಪುಣ್ಯ ಮಾಡಿದವನನ್ನು ಸ್ವರ್ಗಕ್ಕೆ ಕಳುಹಿಸುವನೆಂದು ಹೇಳುತ್ತಿದ್ದಾರಲ್ಲವೆ! ಹಾಗಿರುವಾಗ ನಿಮ್ಮ ದೇವರಾದ ಅಲ್ಲಾಗೆ ರೂಪ, ಹೆಸರು, ಕೆಲಸ ಇದ್ದಂತೇ ಅಲ್ಲವೆ!

**ಹಿಂದೂ :–** ಈಗೇನು ಹೇಳುತ್ತೀಯ ಹೇಳು.

**ಮುಸ್ಲಿಮ್ :–** ಈಗಲೂ ಕೂಡ ನಮ್ಮ ದೇವರಾದ ಅಲ್ಲಾನೇ ದೊಡ್ಡವ ಎನ್ನುತ್ತೇನೆ. ನಮ್ಮ ದೇವರ ಮೇಲೆ ನಮಗೆ ವಿಶ್ವಾಸವಿದ್ದಂತೆ ನಿಮ್ಮ ದೇವತೆಗಳ ಮೇಲೆ ನಿಮಗೆ ವಿಶ್ವಾಸ ಇದೆಯಾ? ಮುಸ್ಲಿಮ್ ಎಂದರೇನೆ ವಿಶ್ವಾಸಿ ಎಂದು ಅರ್ಥ. ನಮ್ಮ ದೇವರಿಗಿಂತ ದೊಡ್ಡವನು ಇಲ್ಲ. ನಮ್ಮ ಇಸ್ಲಾಮ್‌ನಲ್ಲಿರುವ ವಿಶ್ವಾಸ ಯಾವ ಮತದಲ್ಲಿಯೂ ಇಲ್ಲ. ಹೌದಾ, ಅಲ್ವಾ?

**ಕ್ರೈಸ್ತವನು :–** ನಮ್ಮ ಮತದಲ್ಲಿ ತನ್ನಿಂದ ರೋಗ ಚೆನ್ನಾಗಾದ ಮನುಷ್ಯನನ್ನು ನೋಡಿ ಪ್ರಭುವು ನಿನ್ನ ವಿಶ್ವಾಸವೇ ನಿನ್ನನ್ನು ಕಾಪಾಡಿದೆ ಎಂದಿದ್ದಾನೆ. ಆದ್ದರಿಂದ ನಮಗೆ ಕೂಡ ದೇವರ ಮೇಲೆ ವಿಶ್ವಾಸವಿದೆ. ದೇವರ ಮೇಲೆ ವಿಶ್ವಾಸದಿಂದಲೇ ನಾವು ಪ್ರಾರ್ಥನೆ ಮಾಡುತ್ತಿದ್ದೇವೆ.

**ಹಿಂದೂ :–** ನಿಮ್ಮ ಎರಡು ಮತಗಳಲ್ಲಿ ಟೈಮ್‌ಟೇಬಲ್ ಇದೆ. ಅದನ್ನೇ ಪ್ರಾರ್ಥನಾ ಸಮಯ ಎನ್ನುತ್ತಾರೆ. ಕ್ರೈಸ್ತರಿಗೆ ಭಾನುವಾರ, ಮುಸ್ಲಿಮ್‌ರಿಗೆ ಶುಕ್ರವಾರ ಮುಖ್ಯ. ಮುಸ್ಲಿಮ್‌ರು ಪ್ರತಿ ದಿನ ಪ್ರಾರ್ಥನೆ ಮಸೀದ್‌ಗಳಲ್ಲಿ ಮಾಡಿದರೂ ಅದನ್ನು ಬೆಳಗ್ಗೆ, ಮಧ್ಯಾಹ್ನ, ಸಾಯಂಕಾಲ ಮಾಡುತ್ತಾರೆ. ಶುಕ್ರವಾರ ಐದು ಹೊತ್ತು ಮಾಡುತ್ತಾರೆ. ನಮಗೆ ಅಂತಹ ಟೈಮ್‌ಟೇಬಲ್ ಇಲ್ಲ. ಆದ್ದರಿಂದ ನಮ್ಮ ಭಕ್ತಿಯೇ ದೇವರಿಗೆ ಮುಖ್ಯವಾದುದು.

**ಮುಸ್ಲಿಮ್ :–** ನಿಲ್ಲಯ್ಯಾ; ನಮ್ಮದು ಟೈಮ್‌ಟೇಬಲ್ ಭಕ್ತಿನಾ? ನಿಮ್ಮದಲ್ಲವಾ? ನಮಗೆ ಶುಕ್ರವಾರ ಮುಖ್ಯ, ಕ್ರೈಸ್ತರಿಗೆ ಭಾನುವಾರ ಮುಖ್ಯ, ನಿಮಗೆ ಮಧ್ಯದಲ್ಲಿರುವ ಶನಿವಾರ ಮುಖ್ಯವಲ್ಲವೇ! ವೆಂಕಟೇಶ್ವರನಿಗೆ ನೀವು ಶನಿವಾರ ಅಲ್ಲವೆ ಪೂಜಿಸುವುದು. ಹಿಂದೂಗಳೆಲ್ಲರೂ ಶನಿವಾರ ಮನೆ ಬಾಗಿಲು ಶುಭ್ರಮಾಡಿ ಕೊಂಡು ತಲೆಸ್ನಾನ ಮಾಡಿ ಮನೆಯಲ್ಲಿ ಪೂಜೆಗಳು ಮಾಡಲಿಲ್ಲವಾ? ಗುಡಿಗಳಿಗೆ ಹೋಗಿ ಪೂಜೆಗಳು ಮಾಡಿ ಬರುತ್ತಿಲ್ಲವಾ? ಆಂಜನೇಯನಿಗೆ ಶನಿವಾರ, ವೆಂಕಟೇಶ್ವರನಿಗೆ ಶನಿವಾರ, ಶಿವನಿಗೆ ಸೋಮವಾರ ಎಂದು ನೀವು ಟೈಮ್‌ಟೇಬಲ್ ಇಟ್ಟುಕೊಂಡಿಲ್ಲವಾ? ಹೇಳಿರಿ.

**ಕ್ರೈಸ್ತನು :–** ಭಾನುವಾರ ರಜಾ ದಿನ, ಆ ದಿನ ಕೆಲಸಗಳಿರುವುದಿಲ್ಲ ಆದ್ದರಿಂದ ಭಾನುವಾರವನ್ನು ಗುರುತಿಸುವಂತೆ ನಾವು ಇಟ್ಟುಕೊಂಡಿದ್ದೇವೆ. ನೀವು ಶನಿವಾರವನ್ನು ಯಾವುದಕ್ಕೆ ಗುರುತಾಗಿ ಇಟ್ಟುಕೊಂಡಿದ್ದೀರೋ! ಹೇಳಿರಿ.

**ಹಿಂದೂ :–** ನಮ್ಮ ಹಿರಿಯರು ಹಾಗೆ ನಿರ್ಣಯಿಸಿದ್ದಾರೆ, ಆದ್ದರಿಂದ ನಾವು ಹಾಗೆಯೇ ನಮ್ಮ ಸಾಂಪ್ರದಾಯಗಳ ಪ್ರಕಾರ ಮಾಡುತ್ತಿದ್ದೇವೆ.

**ಮುಸ್ಲಿಮ್ :–** ನಾವು ಕೂಡಾ ನಮ್ಮ ಹಿರಿಯರು ನಿರ್ಣಯಿಸಿದಂತೇ ಮಾಡುತ್ತಿದ್ದೇವೆ, ಅದು ನಮ್ಮ ಸಾಂಪ್ರದಾಯ. ನಮ್ಮ ಸಾಂಪ್ರದಾಯಗಳನ್ನು ನೀವು ಟೈಮ್‌ಟೇಬುಲ್ ಎಂದಾಗ, ನಿಮ್ಮ ಸಾಂಪ್ರದಾಯಗಳಿಗೆ ಕೂಡ ಟೈಮ್‌ಟೇಬಲ್ ಇದೆಯೆನ್ನುವುದರಲ್ಲಿ ನಮ್ಮ ತಪ್ಪಿಲ್ಲ ಅಲ್ಲವೆ!

**ಕ್ರೈಸ್ತನು :–** ಯಾರು ಏನೆಂದುಕೊಂಡರೂ! ಯಾವುದು ಏನಾದರೂ! ನಿಮ್ಮ ಮತದಲ್ಲಿನ ದೇವರುಗಳು ಪಾಪಿಗಳನ್ನು ಶಿಕ್ಷಿಸುತ್ತೇನೆಂದು ಹೇಳಿದ್ದಾರೆ. ನಮ್ಮ ದೇವರು ಪಾಪಿಗಳನ್ನು ಕ್ಷಮಿಸುತ್ತೇನೆಂದು ಹೇಳಿದ್ದಾನೆ. ಶಿಕ್ಷಿಸುವವನಿಗಿಂತ ಕ್ಷಮಿಸುವವನೇ ಶ್ರೇಷ್ಠನು. ಆದ್ದರಿಂದ ನಮ್ಮ ದೇವರೇ ಬಹಳ ದೊಡ್ಡವ ಎಂದು ಹೇಳುತ್ತಿದ್ದೇನೆ.

**ಹಿಂದೂ :–** ಪಾಪಿಗಳನ್ನು ಕ್ಷಮಿಸುತ್ತೇನೆ, ಪಾಪಿಗಳಿಗೆ ನನ್ನ ಹತ್ತಿರ ರಕ್ಷಣೆ ಇದೆಯೆಂದು ನಿಮ್ಮ ದೇವರು ಹೇಳುವುದರಿಂದ ಭೂಮಿಮೇಲೆ ಪಾಪಾತ್ಮರು ಹೆಚ್ಚಾಗಿ ಹೋಗುವ ಪ್ರಮಾದವಿದೆ. ಎಷ್ಟು ಪಾಪಗಳು ಮಾಡಿದರೂ ದೇವರು ಕ್ಷಮಿಸುತ್ತಾನೆನ್ನುವ ಧೈರ್ಯದಿಂದ ಮನುಷ್ಯರು ಪಾಪಗಳು ಮಾಡುವುದಕ್ಕೆ ಶುರು ಮಾಡುತ್ತಾರೆ. ಪಾಪಗಳು ಮಾಡಿ ಕ್ಷಮಿಸು, ರಕ್ಷಿಸು ಎಂದು ಪ್ರಭುವನ್ನು ಬೇಡಿಕೊಳ್ಳುತ್ತಾರೆ. ಪ್ರಭು ಕ್ಷಮಿಸುತ್ತಾನೆ. ನಾನು ನಿಮಗಾಗಿಯೇ ರಕ್ತವನ್ನು ಸೋರಿಸಿದ್ದೇನೆಂದು ಪಾಪಕ್ಷಮಾಪಣೆ ನನ್ನ ಹತ್ತಿರ ಇದೆಯೆಂದು ಹೇಳುವುದರಿಂದ ದೇಶದಲ್ಲಿ ದುರ್ಮಾರ್ಗ ಹೆಚ್ಚಾಗಿ ಹೋಗುತ್ತಿದೆ, ಪಾಪಿಗಳ ಸಂಖ್ಯೆ ಹೆಚ್ಚಾಗಿ ಹೋಗುತ್ತಿದೆ. ಇದು ನಿಮ್ಮ ತಪ್ಪು ಅಲ್ಲವೆ!

**ಮುಸ್ಲಿಮ್ :–** ನಮ್ಮ ದೇವರು ಹಾಗೆ ಹೇಳಲಿಲ್ಲ. ಪ್ರಳಯ ಕಾಲದಲ್ಲಿ ಸಮಾಧಿಗಳಿಂದ ಪುನಃ ಮನುಷ್ಯನನ್ನು ಎಬ್ಬಿಸಿ, ಆತನು ಮಾಡಿಕೊಂಡ ಪಾಪವನ್ನು ವಿಚಾರಿಸಿ ನರಕಕ್ಕೆ ಕಳುಹಿಸುತ್ತಿದ್ದಾನೆ. ಪಾಪ ಮಾಡಿದವನನ್ನು ಒದ್ದೆ ಬಟ್ಟೆಯನ್ನು ಹಿಂಡಿದಹಾಗೆ ಹಿಂಡಿ ಹಾರಾಕುವನು. ಆದ್ದರಿಂದ ನಮ್ಮ ಮತದಲ್ಲಿ ದೇವರು ಶಿಕ್ಷಿಸುತ್ತಾನೆನ್ನುವ ಭಯದಿಂದ ಯಾರೂ ಪಾಪ ಮಾಡುವುದಿಲ್ಲ. ಮಾಡುವುದಕ್ಕೆ ಭಯಪಡುತ್ತಾರೆ. ನಮ್ಮ ಇಸ್ಲಾಮ್‌ನಲ್ಲಿ ದೇವರ ಭಯವಿದೆ, ನಿಮ್ಮ ಕ್ರೈಸ್ತದಲ್ಲಿ ದೇವರ ಭಯವಿಲ್ಲ. ಆದ್ದರಿಂದ ಪಾಪಗಳನ್ನು ಇಷ್ಟಬಂದಂತೆ ಭಯ ಇಲ್ಲದಂತೆ ಮಾಡುತ್ತಿದ್ದಾರೆ.

**ಕ್ರೈಸ್ತನು :–** ನಮ್ಮ ದೇವರು ಎಲ್ಲರ ಪಾಪಗಳನ್ನು ಕ್ಷಮಿಸುತ್ತೇನೆಂದು ಹೇಳಲಿಲ್ಲ. ಪ್ರಭುವನ್ನು ನಂಬಿದವರಿಗೆ ಮಾತ್ರವೇ ಕ್ಷಮಾಪಣೆ ಇದೆ.

**ಹಿಂದೂ :–** ಆ ಮಾತು ಹೇಳಿ ನಮ್ಮ ಹಿಂದೂಗಳೆಲ್ಲರನ್ನೂ ನಿಮ್ಮ ಮತದೊಳಗೆ ಎಳೆದುಕೊಳ್ಳುತ್ತಿದ್ದೀರ.

**ಕ್ರೈಸ್ತನು :–** ನಾವು ಹೇಳುವ ಮಾತಲ್ಲ. ನಿಮ್ಮ ಹಿಂದೂಮತದಲ್ಲಿನ ವೇದಗಳಲ್ಲಿಯೇ ಪಾಪಕ್ಷಮಾಪಣೆ ನಿಮಿತ್ತ ರಕ್ತವನ್ನು ಚಿಮ್ಮಿಸುವುದು ಎನ್ನುವ ಮಾತು ಇದೆ. ಹಾಗೆ ಪಾಪಕ್ಷಮಾಪಣೆ ನಿಮಿತ್ತ ರಕ್ತವನ್ನು ಚಿಮ್ಮಿಸಿದವನು ನಮ್ಮ ಪ್ರಭು ಒಬ್ಬನೇ ಇದ್ದಾನೆ. ನಿಮ್ಮ ನಾಲ್ಕು ವೇದಗಳಲ್ಲಿ ಸಾಮವೇದದಲ್ಲಿ ಎರಡನೆ ಭಾಗವಾದ ತಾಂಡಿಯಾ ಮಹಾ ಬ್ರಾಹ್ಮಣದಲ್ಲಿ ಶ್ಲೋ॥ **"ಪ್ರಜಾ ಪ್ರತಿರ್ಥೇ ವೇಭ್ಯಂ ಆತ್ಮನಾ ಯಜ್ಞಂ ಕೃತ್ವಾಪ್ರಾಯಶ್ಚಿತ್"** ಎಂದು ಇದೆ. ಇದರ ಭಾವ ಏನೆಂದರೇ! ಪ್ರಜೆಗಳನ್ನು ಪರಿಪಾಲಿಸುವವನು, ಪ್ರಜೆಗಳ ಪಾಪ ಪರಿಹಾರಾರ್ಥ ತನ್ನ ಸ್ವಂತ ಶರೀರವನ್ನು ಪ್ರಾಯಶ್ಚಿತ್ತವಾಗಿ ನಲುಗಿಸಿಕೊಂಡು ಯಜ್ಞ ಮಾಡುತ್ತಾನೆ. ಪ್ರಜಾಪತಿ ಎಂದರೆ ದೇವರು ಎಂದು ಅರ್ಥ. ಈ ಶ್ಲೋಕದ ಪ್ರಕಾರ ಪ್ರಭು ಪ್ರಜೆಗಳ ಪಾಪಪರಿಹಾ ರಾರ್ಥ ತನ್ನ ಸ್ವಂತ ಶರೀರವನ್ನೇ ಬಲಿ ಕೊಟ್ಟಿದ್ದಾನೆ. ಆದ್ದರಿಂದ ನಿಮ್ಮ ವೇದಗಳ ಪ್ರಕಾರ ನಮ್ಮ ದೇವರೇ ನಿಜವಾದ ದೇವರು.

**ಹಿಂದೂ :–** ನೀವು ನಮ್ಮ ಬೆರಳೇ ತೆಗೆದುಕೊಂಡು ನಮ್ಮ ಕಣ್ಣನ್ನೇ ಇರಿದಂತೆ, ನಮ್ಮ ವೇದಗಳೇ ತೆಗೆದುಕೊಂಡು ನಮ್ಮ ದೇವರನ್ನೇ ಅಲ್ಲಗೆಳೆಯುತ್ತಿದ್ದೀರ. ನಮ್ಮ ವೇದಗಳಲ್ಲಿ ನಿಮಗೆ ಅನುಕೂಲವಾದ ಮಾತುಗಳನ್ನು ಹೇಳಿಕೊಳ್ಳುತ್ತಿದ್ದೀರ. ನಿಮ್ಮ ಬೈಬಲ್‌ನಲ್ಲಿ ನಮ್ಮ ದೇವರನ್ನು ಸಮರ್ಥಿಸುವ ಮಾತುಗಳು ಸಹ ಇವೆ. ನೀವು ನಡೆಯುವ ವಿಧಾನ ತಪ್ಪು ಎಂದು ಹೇಳುವ ವಾಕ್ಯಗಳು ಎಷ್ಟೋ ಇವೆ. ಅವುಗಳೆಲ್ಲವನ್ನು ನಾವು ಕೂಡ ಹೇಳಬಲ್ಲೆವು.

**ಕ್ರೈಸ್ತನು :–** ಎಲ್ಲಿವೆಯೋ ಹೇಳು ನೋಡೋಣ.

**ಹಿಂದೂ :–** ನಿಮ್ಮ ಬೈಬಲ್‌ನಲ್ಲಿಯೇ ಇವೆ. ಇಂತಹ ಕಡೆ ಎಂದು ಹೇಳಲಾರೆನು. ಒಂದು ಬಾರಿಯೇ ಓದಿದ್ದೇನೆ. ಆದ್ದರಿಂದ ಅವು ಸರಿಯಾಗಿ ಜ್ಞಾಪಕವಿಲ್ಲ.

**ಕ್ರೈಸ್ತನು :–** ನಿಮ್ಮ ವೇದಗಳಲ್ಲಿನ ಮಾತುಗಳನ್ನು ಕಂಠಾಪಾಠ ಮಾಡಿ,

ಶ್ಲೋಕಗಳನ್ನು ಅವುಗಳ ನಂಬರ್‌ಗಳನ್ನು, ಅವುಗಳ ಅಧ್ಯಾಯಗಳನ್ನು ನಾವು ಹೇಳಿದಾಗ ನಮ್ಮ ಪುಸ್ತಕಗಳಲ್ಲಿ ಲೋಪಗಳು ಇವೆ ಅವು ಜ್ಞಾಪಕ ಇಲ್ಲ ಎನ್ನುವುದೇನು? ನಮಗೆ ವಿರುದ್ಧವಾದವು ಯಾವಾದರೂ ಇದ್ದರೇ ನೀವು ಸುಮ್ಮನೇ ಬಿಡುತ್ತೀರಾ? ಹಾಗೆ ಇದ್ದರೇ ಕಂಠಾಪಾಟ ಮಾಡಿಕೊಂಡು ಹೇಳಬಹುದಲ್ಲವೇ!

**ಹಿಂದೂ :–** ನಾನು ಒಂದು ಸಲ ಬೈಬಲ್ ಓದಿ ಅವುಗಳಲ್ಲಿ ನಮಗೆ ಅನುಕೂಲವಾದ ವಾಕ್ಯಗಳನ್ನು, ನಿಮ್ಮ ನಡವಳಿಕೆಗೆ ವಿರುದ್ಧವಾದ ವಾಕ್ಯಗಳನ್ನು ನೋಡಿದ್ದೇನೆ. ಅವುಗಳನ್ನು ನೋಟ್ ಮಾಡಿಕೊಂಡು, ಚೆನ್ನಾಗಿ ಓದಿ ಜ್ಞಾಪಕ ಇಟ್ಟುಕೊಂಡು ನಿಮ್ಮಂತಹವರಿಗೆ ಹೇಳಬೇಕೆಂದುಕೊಂಡಿದ್ದೇನೆ. ಅಷ್ಟರಲ್ಲಿ ಆ ಕೆಲಸ ನಿಂತುಹೋಗಿದೆ. ಏಕೆಂದರೇ! ನಮ್ಮ ಮನೆಪಕ್ಕದವನು ವಿಶ್ವಹಿಂದೂ ಪರಿಷತ್‌ನಲ್ಲಿ ಕೆಲಸ ಮಾಡುತ್ತಿರುತ್ತಾನೆ. ಆತನು ನಾನು ಬೈಬಲ್ ಓದುವಾಗ ನೋಡಿ ಹೋಗಿ ಭಜರಂಗ್‌ದಳ್ ಸಂಘದವರಿಗೆ ಹೇಳಿದ್ದಾನೆ. ಆಗ ಕೆಲವರು ಭಜರಂಗ್‌ದಳ್ ಸದಸ್ಯರು, ಕೆಲವರು ವಿಶ್ವಹಿಂದೂ ಪರಿಷತ್ ಸದಸ್ಯರು ಎಲ್ಲರೂ ಸೇರಿ ಅರವತ್ತು (60) ಮಂದಿ ಬಂದು, ನಾನು ಬೈಬಲ್ ಓದುತ್ತಿರುವುದಕ್ಕೆ ನನ್ನನ್ನು ಹೊಡೆದು, ನಾನಾದುರ್ಭಾಷೆಗಳಾಡಿ ಇನ್ನು ಎಂದಾದರೂ ಬೈಬಲ್ ಮುಟ್ಟಿಕೊಂಡರೇ ಸಾಯಿಸುತ್ತೇವೆಂದು ಬೆದರಿಸಿ ಹೋಗಿದ್ದಾರೆ. ಆದ್ದರಿಂದ ನಾನು ಈಗ ನಿಮ್ಮ ಬೈಬಲ್‌ನಲ್ಲಿ ಯಾವ ಲೋಪವಿರುವುದು ಹೇಳಲಾರದೆ ಹೋಗುತ್ತಿದ್ದೇನೆ.

**ಕ್ರೈಸ್ತನು :–** (ನಗುತ್ತಾ) ಈಗ ನಿಮ್ಮ ವಿಶ್ವಹಿಂದೂಪರಿಷತ್ ಆಗಲೀ, ಭಜರಂಗ್‌ದಳ್ ಆಗಲಿ, ಪ್ರತ್ಯಕ್ಷವಾಗಿ ನಮಗೆ ಕೆಟ್ಟದ್ದನ್ನು ಮಾಡಬೇಕೆಂದು ಕೊಂಡರೂ, ಪರೋಕ್ಷವಾಗಿ ನಮಗೆ ಒಳ್ಳೆಯದೇ ನಡೆಯುತ್ತಿದೆ. ಅವರು ಇಲ್ಲದೇ ಹೋದರೇ ನಮ್ಮ ಮತ ಅಷ್ಟೊಂದು ಅಭಿವೃದ್ಧಿ ಆಗುತ್ತಿರಲಿಲ್ಲ. ಅವರಿರುವುದರಿಂದಲೇ ನಮ್ಮ ಮತ ಎಲ್ಲರಿಗು ತಿಳಿದಿದೆ. ನಮ್ಮ ಮೇಲೆ ಎಲ್ಲರಿಗೂ ಸಹಾನುಭೂತಿ ಏರ್ಪಟ್ಟಿದೆ. ಬಹಳ ಬೇಗನೇ ನಮ್ಮ ಮತ ವಿಸ್ತರಿಸಿ ಹೋಗಿದೆ.

ಅವರು ನಿನ್ನನ್ನು ಬೈಬಲ್ ಓದಲು ಬಿಡದಂತಿರುವುದರಿಂದಲೇ ಅಲ್ಲವೆ! ನೀನು ಈಗ ತಪ್ಪು ಹಿಡಿಯಲಾರದೆ ಹೋಗುತ್ತಿದ್ದೀಯ. ಅದರಿಂದ ಅವರು ನಮಗೆ ಮೇಲು ಮಾಡಿದಂತೇ ಅಲ್ಲವೆ!

**ಮುಸ್ಲಿಮ್ :–** ವಿಶ್ವಹಿಂದೂಪರಿಷತ್, ಭಜರಂಗ್‌ದಳ್ ಅವರಿಂದಲೇ ನಮ್ಮ ದೇಶದಲ್ಲಿ ಮುಸ್ಲಿಮ್‌ರ ಉಗ್ರವಾದ ಬೆಳೆದುಹೋಗಿದೆ. ಅವರು ನಮ್ಮ ಮುಸ್ಲಿಮ್‌ರಿಗೆ ಸ್ವಲ್ಪ ವಿರೋಧ ಮಾಡಿದರೇ, ನಮ್ಮ ಮುಸ್ಲಿಮ್‌ರು ನೇರವಾಗಿ ಎಷ್ಟೋ ಮಂದಿ ಹಿಂದೂಗಳನ್ನು ಸಾಯಿಸುತ್ತಿದ್ದಾರೆ. ಆ ಎರಡು ಸಂಸ್ಥೆಗಳ ಕೆಲಸಗಳಿಗೆ ಅಮಾಯಕರಾದ ಹಿಂದೂಗಳು ಉಗ್ರವಾದಿಗಳ ಕೈಯ್ಯಲ್ಲಿ ಬಲಿಯಾಗಿ ಹೋಗುತ್ತಿದ್ದಾರೆ. ಮುಖ್ಯವಾಗಿ ಹೇಳಬೇಕೆಂದರೇ ಹಿಂದೂಗಳೆಲ್ಲರೂ ಈ ಎರಡು ಸಂಸ್ಥೆಗಳ ಬಗ್ಗೆ ಅಸಹ್ಯ ಪಡುತ್ತಿದ್ದಾರೆ. ಹಿಂದೂ ಮತ ನಾಶಕ್ಕೇ ಈ ಸಂಸ್ಥೆಗಳು ಹುಟ್ಟಿವೆ. ಎಂದುಕೊಳ್ಳುತ್ತಿದ್ದಾರೆ.

**ಕ್ರೈಸ್ತನು :–** ವಿಶ್ವಹಿಂದೂಪರಿಷತ್‌ರವರು ವಿವೇಕಾನಂದನ ಹೆಸರನ್ನು ದೊಡ್ಡದಾಗಿ ಹೇಳಿಕೊಳ್ಳುತ್ತಿರುತ್ತಾರಲ್ಲಾ! ವಿವೇಕಾನಂದನು ಪ್ರಭುವನ್ನು ಕುರಿತು ಎಲ್ಲೂ ಕೆಟ್ಟದಾಗಿ ಆಗಲಿ, ಕಡಿಮೆ ಮಾಡಿಯಾಗಲೀ ಮಾತನಾಡಲಿಲ್ಲ. ಹಿಂದೂಮತದಲ್ಲಿ ವಿವೇಕಾನಂದನ ಸ್ಫೂರ್ತಿಯಿಂದ ಮುಂದಕ್ಕೆ ಹೋಗುವ ಹಿಂದೂಗಳು, ಪ್ರಭು ಮಾತು ಕೇಳುತ್ತಲೇ ಏಕೆ ಉರಿದುಬೀಳುತ್ತಿದ್ದಾರೆ. ಯೇಸು ಪ್ರಭು ಮಾತನ್ನು ನೋಡುತ್ತಲೇ ಏಕೆ ಎಲರ್ಜಿ ಬಂದವರಂತೆ ಪ್ರವರ್ತಿಸುತ್ತಿದ್ದಾರೆ. ಬೈಬಲ್‌ನ್ನು ಓದುತ್ತಿರುವ ನಿನ್ನನ್ನು ಏಕೆ ಹೊಡೆದಿದ್ದಾರೆ? ಬೈಬಲನ್ನು ಓದಿದ ನಿನ್ನ ಮೇಲೆ ಅಷ್ಟು ಕೋಪವನ್ನು ಪ್ರದರ್ಶಿಸಿದವರು ಪ್ರಭುವನ್ನು ಗೌರವಿಸಿದ ವಿವೇಕಾನಂದ ನನ್ನು ಏಕೆ ಹೀಯಾಳಿಸಿಕೊಳ್ಳಲಿಲ್ಲ. "ಸ್ವಾಮಿ ವಿವೇಕಾನಂದ ಸಮಗ್ರ ಸಪ್ರಾಮಾಣಿಕ ಜೀವಿತಗಾಥೆ" ಪುಸ್ತಕವೊಂದರ ಎರಡನೆ ಭಾಗದಲ್ಲಿ 17ನೇ ಪುಟದಲ್ಲಿ ಎರಡನೆ ಪೇರಾದಲ್ಲಿ ಎರಡನೆ ಲೈನ್‌ನಲ್ಲಿ "ನಾನೂ ಸಹ ಪಾಲಸ್ತೀನಾದಲ್ಲಿ ಕ್ರಿಸ್ತನೊಂದಿಗೆ ಸೇರಿ ಜೀವಿಸಿದ್ದರೇ ಆತನ ಪಾದಗಳನ್ನು ಕಣ್ಣೀರಿನಿಂದಲ್ಲ, ನನ್ನ ಹೃದಯರುಧಿರ ದಿಂದ ತೊಳೆಯುತ್ತಿದ್ದೆನು" ಎಂದು ವಿವೇಕಾನಂದನು ಸ್ವತಃವಾಗಿ ಈ ಮಾತು

ಎಂದಾಗ ವಿವೇಕಾನಂದನನ್ನು ವಿಶ್ವಹಿಂದೂಪರಿಷತ್‌ರವರು ಏಕೆ ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದಾರೆ. ಅವರಿಗಿರುವುದು ಪರಮತ ದ್ವೇಷ ಹೊರತು ಹಿಂದೂ ಮತದಲ್ಲಿನ ಧರ್ಮಗಳು ಒಂದೂ ಸಹ ತಿಳಿದಿಲ್ಲ. ಹಿಂದೂ ಮತದಲ್ಲಿ ದೇವರ ಜ್ಞಾನ ಇಲ್ಲ, ದೇವತಾಭಕ್ತಿ ಇದೆ. ಆದ್ದರಿಂದ ಜ್ಞಾನಜಿಜ್ಞಾಸಿಗಳೆಲ್ಲರೂ ಇತರ ಮತದೊಳಗೆ ಹೋಗುತ್ತಿದ್ದಾರೆ.

**ಮುಸ್ಲಿಮ್ :–** ನಾನೂ ಸಹ ಮೊದಲು ಹಿಂದೂನೇ. ಹಿಂದೂತ್ವವನ್ನು ಅಡ್ಡ ಇಟ್ಟುಕೊಂಡು ವಿನಾಯಕ ಚವಿತಿ ಹಬ್ಬದಲ್ಲಿ ದೌರ್ಜನ್ಯವಾಗಿ ಹಣ ವಸೂಲು ಮಾಡುವವರನ್ನು ನೋಡಿ, ಅಂತಹ ಅನ್ಯಾಯಕ್ಕೆ ಬೆಂಬಲ ಕೊಡುವ ಹಿಂದೂ ಸಂಸ್ಥೆಗಳನ್ನು ನೋಡಿ, ಆ ಪದ್ಧತಿಗಳು ಹಿಡಿಸದೆ ಏಕೇಶ್ವರೋಪಾಸನೆ ಇರುವ ಇಸ್ಲಾಮ್ ಮತದೊಳಗೆ ಬಂದು ನನ್ನ ಹೆಸರನ್ನು ಸಹ ಬದಲಾಯಿಸಿಕೊಂಡಿದ್ದೇನೆ.

**ಹಿಂದೂ :–** ನಿಜವೇ ವಿನಾಯಕ ಚತುರ್ಥಿ ತುಂಟ ಹಬ್ಬ ಆಗಿಹೋಗಿದೆ. ಆ ಹಬ್ಬದಲ್ಲಿ ಚಂದಾ ವಸೂಲಿ ಮಾಡುವವರು ಬೀಧಿ ರೌಡೀಗಳಂತೆ ಪ್ರವರ್ತಿಸುತ್ತಿದ್ದಾರೆ. ಹಿಂದೂಮತ ದೊಡ್ಡದೇ, ಆದರೇ ಇಂತಹವರಿಂದ ಅಪ್ರತಿಷ್ಟೆ ಪಾಲಾಗಿ ಹೋಗುತ್ತಿದೆ.

**ಕ್ರೈಸ್ತನು :–** ನಿಮ್ಮ ಮತದಲ್ಲಿ ಭಗವದ್ಗೀತೆಯನ್ನು ದೊಡ್ಡದಾಗಿ ಬೋಧಿಸುವ ಒಬ್ಬ ದೊಡ್ಡ ಗುರುವಿನ ಮೇಲೆಯೇ ವಿಶ್ವಹಿಂದೂ ಪರಿಷತ್‌ರವರು, ಭಜರಂಗ್‌ದಳ್‌ರವರು ವೇದಗಳನ್ನು ಹೇಳದಂತೆ ಭಗವದ್ಗೀತೆಯನ್ನು ಹೇಳುತ್ತೀಯಾ, ವೇದಗಳಿಗಿಂತ ಭಗವದ್ಗೀತೆ ಮೊದಲು ಹುಟ್ಟಿದೆಯೆನ್ನುತ್ತೀಯ ಎಂದು ದಾಳಿ ಮಾಡಿದ ದಿನವೇ ಹಿಂದೂಮತ ಪ್ರತಿಷ್ಟೆ ಅಗ್ನಿಯಲ್ಲಿ ಬರೆತುಹೋಗಿದೆ. ಆ ಸಂಘಟನೆಯನ್ನು ನೋಡಿದ ನಂತರವೇ ಹಿಂದೂಮತದಲ್ಲಿ ಒಬ್ಬ ಗುರುವನ್ನೇ ಅವಮಾನಪಡಿಸುವ ಹಿಂದೂ ಸಂಘಗಳು ಇರುವುದನ್ನು ನೋಡಿ ಕ್ರೈಸ್ತವ ಮತದಲ್ಲಿ ಫಾದರ್‌ಗೂ, ಪಾಸ್ಟರ್‌ಗೂ ಎಷ್ಟೋ ಮರ್ಯಾದೆ ಇದೆಯೆಂದು ಕ್ರೈಸ್ತರು ಅವರ ಗುರುಗಳ ಬಗ್ಗೆ ವಿನಯ ವಿಧೇಯತೆ ಹೊಂದಿ ಗೌರವಭಾವದಿಂದ ಇರುವುದನ್ನು ನೋಡಿ ನಾನು ಕ್ರೈಸ್ತನಾಗಿ ಬದಲಾಗಿದ್ದೇನೆ.

(ಅಷ್ಟರಲ್ಲಿ ಆರು ಮಂದಿ ಕಳ್ಳರು ಬಂದು, ಆ ಮೂವರನ್ನು ಹೊಡೆದು ಅವರ ಬಳಿ ಇರುವವೆಲ್ಲಾ ಕಸಿದುಕೊಂಡು ಅಷ್ಟಕ್ಕೆ ನಿಲ್ಲದೆ ಅವರ ತಲೆ ಕೂದಲನ್ನು, ಗಡ್ಡದ ಕೂದಲನ್ನು ಬೋಳಿಸಿ ಇವರು ಇಂತಹ ಮತದವರು ಎನ್ನುವ ಗುರುತು ಇಲ್ಲದಂತೆ ಮಾಡಿದ್ದಾರೆ. ಅವರಲ್ಲಿ ಕಳ್ಳರಿಗೆ ದೊಡ್ಡವನಾದ ವ್ಯಕ್ತಿ ಹೀಗೆ ಹೇಳಿದ್ದಾನೆ.)

**ಕಳ್ಳ :–** ಇಲ್ಲಿಯವರೆಗು ಮರೆಯಲ್ಲಿದ್ದು ನಿಮ್ಮ ಮಾತುಗಳನ್ನೆಲ್ಲ ಕೇಳಿದ್ದೇನೆ. ನಮ್ಮ ದೇವರು ದೊಡ್ಡವ, ನಮ್ಮದೇವರು ದೊಡ್ಡವ ಎಂದು ವಾದಿಸಿಕೊಳ್ಳುತ್ತಿದ್ದೀರ. ನಿಮ್ಮ ಮತಗಳು ಮೇಲ್ನೋಟಕ್ಕೆ ಕಾಣಿಸುವಂತೆ ಗಡ್ಡ ಹಾಗೂ ಮೀಸೆಗಳನ್ನು ಬೆಳಸಿಕೊಂಡಿದ್ದೀರ. ಈಗ ಅವುಗಳನ್ನು ತೆಗೆದುಹಾಕಿದ್ದೇವಲ್ಲ! ಈಗ ಎಲ್ಲರೂ ಸಮಾನವಾಗಿ ಕಾಣಿಸುತ್ತಿದ್ದೀರಲ್ಲ! ನಿಮ್ಮ ಶರೀರಗಳ ಮೇಲೆ ಯಾವುದಾದರೂ ಇಂತಹ ಮತದವನೆಂದು ಗುರುತು ಇದೆಯಾ? ಹೇಳಿರಿ.

**ಹಿಂದೂ :–** ನೀನು ಕಳ್ಳ. ನಮ್ಮ ಮತಗಳ ವಿಷಯ, ದೇವರ ವಿಷಯ ನಿನಗೇನು ತಿಳಿದಿದೆ.?

**ಕಳ್ಳ :–** ನಾನು ಮೊದಲು ದೊಡ್ಡ ಹೇತುವಾದಿ, ನಂತರ ಕಳ್ಳ. ನನಗೆ ತಿಳಿಯದ ಮತ ನನಗೆ ತಿಳಿಯದ ದೇವರು ಇದ್ದಾನಾ?

**ಮುಸ್ಲಿಮ್ :–** ನೀನು ಕಳ್ಳ, ನಮ್ಮ ಹತ್ತಿರವಿರುವುದನ್ನು ಕಸಿದುಕೊಂಡು ಕಳ್ಳತನ ಮಾಡಬಹುದು. ಆದರೆ ಈ ವಿಧವಾಗಿ ನಿಮ್ಮ ಗಡ್ಡವನ್ನು ತೆಗೆದುಹಾಕುವುದು ಏಕೆ? ನೀನು ಹಾಗೆ ಮಾಡುವುದರಿಂದ ನಮ್ಮ ಮತವನ್ನು, ಮತಾಚರಣೆಯನ್ನು ಅವಮಾನಿಸಿದಂತೆ ಅಲ್ಲವೆ!

**ಕಳ್ಳ :–** ಹೌದು ನಾನು ಕಳ್ಳನೇ ನನ್ನ ಕಳ್ಳತನ ಸ್ಪೆಷಲ್‌ಆಗಿ ಇರುತ್ತದೆ. ನಿನ್ನ ಹತ್ತಿರ ಇರುವುದೆಲ್ಲಾ ದೋಚಿಕೊಂಡರೂ ಅರವತ್ತು (60) ರೂಪಾಯಿಗಳಿಗಿಂತ ಹೆಚ್ಚಾಗಿ ಇಲ್ಲ. ಆ ಕಳ್ಳತನ ಏನೂ ಗಿಟ್ಟುವುದಿಲ್ಲ. ಆದ್ದರಿಂದ ನಿಮ್ಮ ಹತ್ತಿರ ಇದ್ದು ಮತ್ತೊಂದು ಅಜ್ಞಾನವನ್ನು ದೋಚಿಕೊಳ್ಳಬೇಕೆಂದುಕೊಂಡಿದ್ದೇವೆ. ನಾನು

ಕಳ್ಳತನ ಮಾಡಿದ ನಂತರ ನಿನ್ನ ಹತ್ತಿರ ಏನೂ ಉಳಿಯಬಾರದು. ನನ್ನಂತೆ ದೋಚಿಕೊಳ್ಳುವವನು ದೇಶದಲ್ಲಿ ಯಾವನೂ ಇರುವುದಿಲ್ಲ. ಈಗ ಹೇಳು ನಿನ್ನ ಮತ, ನಿನ್ನ ಹೆಸರು ಯಾವುದು? ಊ... ಮೂವರೂ ಹೇಳಿರಿ.

**ಮುಸ್ಲಿಮ್ :–** ನನ್ನದು ಇಸ್ಲಾಮ್ ಮತ, ನನ್ನ ಹೆಸರು ವಹೀದ್.

**ಕ್ರೈಸ್ತನು :–** ನನ್ನ ಮತ ಕ್ರೈಸ್ತ, ನನ್ನ ಹೆಸರು ಜಾನ್.

**ಹಿಂದೂ :–** ನನ್ನ ಹೆಸರು ಶ್ರೀನಾಥಗುಪ್ತ, ನನ್ನದು ಹಿಂದೂ ಮತ.

**ಕಳ್ಳ :–** ಮೊದಲು ನಿಮ್ಮ ಹೆಸರುಗಳಿಂದ ಶುರು ಮಾಡುತ್ತೇನೆ. ಈಗ ಹೇಳು ಗುಪ್ತ, ಈ ಹೆಸರು ನಿನ್ನದಾ? ನಿನ್ನ ಶರೀರದ್ದಾ? ಎಂದು ಪ್ರಶ್ನಿಸಿಕೊಂಡು ನೋಡಿದರೇ ನಿನ್ನ ಶರೀರದ್ದೇ, ಆದರೆ ನಿನ್ನದಲ್ಲ. ನಾನು ಕೇಳಿರುವುದು ನಿನ್ನ ಹೆಸರನ್ನು. ಈಗಲಾದರೂ ಹೇಳು ನಿನ್ನ ಹೆಸರು ಏನು? ಇಲ್ಲಿ ಒಂದು ಕಂಡೀಷನ್ ಮಾಡುತ್ತಿದ್ದೇನೆ. ನೀವು ನನ್ನ ಕೈಯ್ಯಲ್ಲಿ ಸಿಕ್ಕಿಹಾಕಿಕೊಂಡಿದ್ದೀರ. ಆದ್ದರಿಂದ ನನ್ನ ಕಂಡೀಷನ್‌ಗೆ ಒಪ್ಪಿಕೊಳ್ಳಬೇಕಾದ್ದೇ. ಆ ಕಂಡೀಷನ್ ಏನೆಂದರೆ ನೀವು ನನ್ನ ಪ್ರಶ್ನೆಗಳಿಗೆ ಉತ್ತರ ಹೇಳದೇ ಹೋದರೆ ಹೊಡೆಯುತ್ತೇನೆ. ಹೇಳಿದರೂ ಅದು ಉತ್ತರ ಅಲ್ಲದಿದ್ದರೂ ಹೊಡೆಯುತ್ತೇನೆ.

**ಹಿಂದೂ :–** ನನ್ನ ಶರೀರಕ್ಕಿರುವ ಹೆಸರೇ ನನ್ನದು ಎಂದುಕೊಂಡಿದ್ದೇನೆ. ಉಳಿದ ವಿಷಯ ನನಗೆ ತಿಳಿದಿಲ್ಲ.

**ಮುಸ್ಲಿಮ್ :–** ಶರೀರಕ್ಕಿರುವ ಹೆಸರೇ ನನ್ನ ಹೆಸರಾಗುತ್ತದೆ ಅಲ್ಲವೆ!

**ಕ್ರೈಸ್ತನು :–** ಶರೀರ, ನಾನು ಇಬ್ಬರೂ ಒಂದೇ, ಆದ್ದರಿಂದ ನನ್ನ ಶರೀರದ ಹೆಸರೇ ನನ್ನದಾಗುತ್ತದೆ.

**ಕಳ್ಳ :–** ನೀವು ಹೀಗೆ ಹೇಳುತ್ತೀರೆಂದು ನಾನಂದುಕೊಂಡಿದ್ದೇನೆ. ಈಗ ಆಲೋಚಿಸಿ ಹೇಳಿರಿ. ನೀನು ಮರಣಿಸಿದಾಗ ನೀನು ಇಲ್ಲದಂತೆ ಹೋಗುತ್ತಿದ್ದೀಯ. ಆದರೂ

ನಿನ್ನ ಶರೀರ ಅಲ್ಲಿ ಮಲಗಿದೆಯಲ್ಲವೆ! ಶರೀರ, ನೀನು ಒಂದೇ ಆದರೇ, ನೀನು ಹೋದ ಕೂಡಲೇ ನಿನ್ನ ಶರೀರವೂ ಸಹ ಕಾಣಿಸದಂತೆ ಹೋಗಬೇಕಲ್ಲವೆ! ನೀನು ಕಾಣಿಸದಂತೆ ಹೋದರೂ ನಿನ್ನ ಶರೀರ ಇದೆ. ಆದ್ದರಿಂದ ನೀನು ಬೇರೆ, ನಿನ್ನ ಶರೀರ ಬೇರೆಯೆಂದು ತಿಳಿಯುತ್ತಿದೆ. ಗುಪ್ತ ಎನ್ನುವ ಹೆಸರು ನಿನ್ನ ಶರೀರವನ್ನು ನೋಡಿ ಇಟ್ಟಿರುವುದೇ. ನಿನ್ನನ್ನು ನೋಡಿ ಇಟ್ಟಿರುವುದಲ್ಲ. ನೀನು ಕಾಣಿಸುವವನು ಅಲ್ಲ. ನಿನ್ನ ಶರೀರವೇ ಕಾಣಿಸುತ್ತಿದೆ. ಈಗ ಹೇಳು ನೀನು ಯಾರೋ?

**ಮುಸ್ಲಿಮ್ :–** ಶರೀರ, ನಾನು ಬೇರೆ ಬೇರೆಯಾದಾಗ, ಹೆಸರು ಶರೀರಕ್ಕೇ ಆಗಿದ್ದಾಗ, ನಾನು ಯಾರೋ ತಿಳಿಯದಿರುವಾಗ, ನಾನು ಯಾರೆಂದು ಹೇಳಬೇಕು. ಇಲ್ಲಿಯವರೆಗು ನಾನು "ವಹೀದ್" ಎಂದುಕೊಂಡಿದ್ದೇನೆ. ಈಗ ವಹೀದ್ ಹೆಸರು ಶರೀರದ್ದೆ ನನ್ನದಲ್ಲವೆಂದು ತಿಳಿಯುತ್ತಿದೆ.

**ಕಳ್ಳ :–** ನೀನು ಯಾರೋ ನಿನಗೇ ತಿಳಿಯದಿರುವಾಗ, ನೀನು ಇಂತಹ ಮತದವನೆಂದು ಹೇಳುವುದಕ್ಕೆ ಅವಕಾಶವಿದೆಯಾ? ಅವಕಾಶವಿಲ್ಲ. ಮತ ಹೊರಗಿನ ಗ್ರಂಥಗಳಲ್ಲಿ ಇದೆ. ಹೊರಗಿನ ಗ್ರಂಥಗಳ ವಿಷಯ ತಿಳಿದಾಗಾಗಲೀ, ಇಲ್ಲವೆ ಹೊರಗಿನ ವ್ಯಕ್ತಿ ಗುರುವಾಗಿ ಇದ್ದು ಹೇಳಿದ ಮತವನ್ನು ತಿಳಿದಾಗಾಗಲಿ, ನನ್ನದು ಆ ಮತ ಎನ್ನುತ್ತಿದ್ದಾರೆ. ನೀನು ಯಾರೋ ನಿನಗೇ ತಿಳಿಯದಿರುವಾಗ ಇದು ನನ್ನ ಮತವಲ್ಲ, ಅದು ನನ್ನಮತ ಎನ್ನುವುದು ತಪ್ಪಲ್ಲವೆ! ಒಂದು ಚಿಕ್ಕ ಉದಾಹರಣೆಯನ್ನು ನೋಡೋಣ; ಒಂದು ಹಸು, ಕತ್ತೆ, ನಾಯಿ ಎನ್ನುವ ಮೂರು ಪ್ರಾಣಿಗಳು ಇವೆ. ಮೂವರು ವ್ಯಕ್ತಿಗಳು ಒಬ್ಬರು ಹಸುವನ್ನು, ಒಬ್ಬರು ನಾಯಿಯನ್ನು, ಒಬ್ಬರು ಕತ್ತೆಯನ್ನು ಸ್ವಂತ ಮಾಡಿಕೊಂಡಿದ್ದಾರೆ. ಹಸುವನ್ನು ಹಿಡಿದುಕೊಂಡವನು ಅದರ ಹಗ್ಗವನ್ನು ತನ್ನಕೈಯ್ಯಲ್ಲಿ ಇಟ್ಟುಕೊಂಡಿದ್ದಾನೆ. ಹಸುವಿಗಿರುವ ಹಗ್ಗವನ್ನು ತನ್ನ ಕೈಯ್ಯಲ್ಲಿ ಇಟ್ಟುಕೊಂಡಿರುವುದರಿಂದ ಇದು ನನ್ನದು ಎಂದು ಹೇಳಬಹುದು. ಆದರೆ ತನ್ನ ಅಡ್ರಸ್ಸೇ ತನಗೆ ತಿಳಿಯದಿರುವಾಗ, ತನ್ನ ಹೆಸರೇ ತನಗೆ ತಿಳಿಯದಿರುವಾಗ, ಹಸು ಯಾವುದೋ, ಹಸುವಿನ

ಹಗ್ಗಯಾವುದೋ ತಿಳಿಯದಿರುವಾಗ ತಾನು ಮತ ಎನ್ನುವ ಹಸುವನ್ನು ಹಿಡಿದುಕೊಂಡಿದ್ದೇನೆಂದು ಹೇಳುವುದು ವಿಡ್ಡೂರ ಅಲ್ಲವೆ? ನೀನು ಎಲ್ಲಿದ್ದೀಯ? ನಿನ್ನ ಹಸು ಎಲ್ಲಿದೆಯೆಂದು ಕೇಳಿದರೇ ಹೇಳಬಲ್ಲನಾ? ಮೂರು ಪ್ರಾಣಿಗಳನ್ನು ಮೂರು ಮತಗಳಾಗಿ ಹೋಲಿಸಿ ನೋಡಿದರೇ ಅವುಗಳಿಗು ನಿನಗೂ ಸಂಬಂಧ ವಿಲ್ಲ. ಹಸು ನಿನ್ನ ಕೈಗೆ ಸಿಗದಂತಿದ್ದರೂ ಹಸು ನನ್ನದು ಎಂದು ಭ್ರಮಿಸಿದಂತೆ ಆ ಮತ ನನ್ನದು ಎನ್ನುತ್ತಿದ್ದೀಯಾ.

ಈಗ ನಾನು ಬಂಧಿಸಿ ನಿಮ್ಮನ್ನು ತೊಂದರೆ ಇಡುತ್ತಿದ್ದೇನೆ. ಈಗ ದೇವರನ್ನು ಕಾಪಾಡೆಂದು ಕೇಳಿದರೂ ದೇವರು ಬಂದು ನಿಮ್ಮನ್ನು ಕಾಪಾಡುವು ದಿಲ್ಲ. ಏಕೆ ಗೊತ್ತಾ ನಿನ್ನ ಅಡ್ರಸ್ ನಿನಗೇ ತಿಳಿದಿಲ್ಲ, ನಾನು ಇಂತಹ ಕಡೆ ಇದ್ದೇನೆಂದು ಹೇಳಲಾರೆ. ನಿನ್ನ ಅಡ್ರಸ್ ನಿನಗೇ ತಿಳಿಯದಿರುವಾಗ, ದೇವರ ಅಡ್ರಸ್ ನಿನಗೇ ಸ್ವಲ್ಪವೂ ತಿಳಿದಿಲ್ಲ. ಆದ್ದರಿಂದ ಆತನು ಎಲ್ಲಿದ್ದಾನೆಂದು ಕರೆಯುತ್ತೀಯ? ನಿನ್ನ ಅಡ್ರಸ್ ಆಗಲಿ, ದೇವರ ಅಡ್ರಸ್ ಆಗಲಿ ತಿಳಿಯದಂತೆ ಬದುಕುವ ನೀನು ನಾನು ಇಂತಹ ಮತದವನು, ನನ್ನ ದೇವರು ಇಂತಹವನು ಎಂದು ಹೇಳಬಲ್ಲೆಯಾ? ಒಂದುವೇಳೆ ನೀನು ಹೇಳಿದರೂ ನಾವು ನಂಬಬೇಕಾ? ನೀನು ವಹೀದ್ ಎಂದರೂ ನೀನು ಇಸ್ಲಾಮ್ ಎಂದರೂ, ನನ್ನ ದೇವರು ಅಲ್ಲಾ ಎಂದರೂ, ನಾನು ನಂಬುವುದಿಲ್ಲ. ನೀನು ವಹೀದ್ ಅಲ್ಲದಿರುವಾಗ, ನಿನ್ನ ದೇವರು ಅಲ್ಲಾ ಎಂದು ನಾನೇಕೆ ನಂಬಬೇಕು? ಹೇಳು ಗುಪ್ತ ನೀನು ದೇವರನ್ನು ನೋಡಿದ್ದೀಯ? ಇಲ್ಲವೆ ದೇವರ ಅಡ್ರಸ್ ಏನಾದರೂ ನಿನಗೆ ತಿಳಿದಿದೆಯಾ?

**ಗುಪ್ತ :–** ನಾನು ಇಲ್ಲಿಯತನಕ ದೇವರನ್ನು ನೋಡಲಿಲ್ಲ. ಆತನು ಎಲ್ಲಿರುವುದು ತಿಳಿದಿಲ್ಲ.

**ಕಳ್ಳ :–** ನೀನೇ ಅಲ್ಲ, ಜಾನ್ ಆಗಲೀ, ವಹೀದ್ ಆಗಲಿ ನೋಡಲಿಲ್ಲ. ದೇವರು ಹೇಗಿರುತ್ತಾನೋ ತಿಳಿದಿಲ್ಲ, ಎಲ್ಲಿರುತ್ತಾನೋ ತಿಳಿದಿಲ್ಲ, ಏನು

ಮಾಡುತ್ತಿರುತ್ತಾನೋ ಸಹ ತಿಳಿದಿಲ್ಲ. ದೇವರ ವಿಷಯ ಸ್ವಲ್ಪವಾದರೂ ತಿಳಿಯದಿರುವಾಗ ದೇವರಿಗೆ ಒಂದು ಹೆಸರನ್ನಿಟ್ಟು, ನಮ್ಮ ದೇವರು ಇಂತಹವನೆಂದು ಹೇಳುವುದು ಅಸತ್ಯವಲ್ಲವೆ?

**ಮುಸ್ಲಿಮ್ :–** ನಮ್ಮ ಮತದಲ್ಲಿ ನಮ್ಮ ಪ್ರವಕ್ತ ಹೇಳಿದಂತೆ ನಡೆದುಕೊಳ್ಳುತ್ತಿದ್ದೇವೆ. ಪ್ರವಕ್ತ ಹೇಳಿದಂತೆ ನಡೆದುಕೊಂಡರೆ ದೇವರ ಹತ್ತಿರಕ್ಕೆ ಹೋಗಬಲ್ಲೆವೆಂದು ನಮಗೆ ನಂಬಿಕೆ ಇದೆ.

**ಕಳ್ಳ :–** ನಿಮ್ಮ ಪ್ರವಕ್ತ ಹೇಳಿದಂತೆ ನಡೆದುಕೊಂಡರೆ ಘರವಾಗಿಲ್ಲ. ನಿಮ್ಮ ಪ್ರವಕ್ತ ಬಹಳ ದೊಡ್ಡ ದೈವಜ್ಞಾನಿ, ಆತನು ಹೇಳಿದಂತೆ ನಡೆದುಕೊಂಡರೇ ದೇವರ ಹತ್ತಿರಕ್ಕೆ ಹೋಗಬಹುದು. ಪ್ರವಕ್ತ ಹೇಳಿದ ವಿಧಾನವನ್ನು ಅರ್ಥ ಮಾಡಿಕೊಳ್ಳಲಾರದವರು, ಪ್ರವಕ್ತ ಹೇಳಿದಂತೆ ಮಾಡುತ್ತಿದ್ದೇವೆಂದು ಹೇಳುತ್ತಿರುವರು ಆದರೆ ಪ್ರವಕ್ತ ಹೇಳಿದ ಪ್ರಕಾರ ಅವರು ನಡೆಯಲಿಲ್ಲವೆಂದು ಅವರಿಗೆ ತಿಳಿದಿಲ್ಲ. ಪ್ರವಕ್ತ ಬಹಳ ಸೂಕ್ಷ್ಮ ವಿಷಯಗಳನ್ನು ಹೇಳಿದಾಗ, ಕೆಲವರು ಮುಸ್ಲಿಮ್‌ರು ಆ ಮಾತುಗಳನ್ನು ಅಪಾರ್ಥ ಮಾಡಿಕೊಂಡ ಹಾಗೆ ತಿಳಿಯುತ್ತಿದೆ. ಪ್ರವಕ್ತ ದೇವರ ಕಡೆ ಮುಸ್ಲಿಮ್‌ರನ್ನು ನಡೆಸಬೇಕೆಂದುಕೊಂಡಾಗ, ಆತನ ಮಾತುಗಳನ್ನು ಅರ್ಥ ಮಾಡಿಕೊಳ್ಳದೆ ಕೆಲವರು ಮುಸ್ಲಿಮ್‌ರು ಸೈತಾನ್ (ಮಾಯೆ) ಕಡೆ ಹೋಗುತ್ತಿದ್ದಾರೆ. ಪ್ರಳಯದಲ್ಲಿ ಪ್ರತಿ ಮನುಷ್ಯನನ್ನು ಸಮಾಧಿಯಿಂದ ದೇವರು ಎಬ್ಬಿಸುತ್ತಾನೆಂದು, ಅವನ ಪಾಪಪುಣ್ಯಗಳನ್ನು ವಿಚಾರಿಸಿ ಸ್ವರ್ಗ ನರಕಗಳಿಗೆ ಕಳುಹಿಸುತ್ತಾನೆಂದು, ಅಲ್ಲಾ ಎಬ್ಬಿಸಿದಾಗ ಎಬ್ಬಿಸಲ್ಪಟ್ಟ ಅವನ ಶರೀರದ ಮೇಲೆ ಒಂದು ತುಂಡು ಬಟ್ಟೆಯೂ ಸಹ ಇರುವುದಿಲ್ಲವೆಂದು, ಆಗ ಯಾವ ಗುಣ ಭಾವನೆಗಳಿರುವುದಿಲ್ಲವೆಂದು ಪ್ರವಕ್ತ ಹೇಳಿದಾಗ, ಆ ಮಾತುಗಳಲ್ಲಿ ಪ್ರಳಯ ಎಂದರೇ ಯಾವ ಪ್ರಳಯವೊ, ಯಾವ ಮುಸ್ಲಿಮ್‌ಗೂ ಅರ್ಥವಾಗಲಿಲ್ಲ. ಸಮಾಧಿ ಎಂದರೆ ಸಮಾಧಿ ಯಾವುದೋ ಅರ್ಥ ಮಾಡಿಕೊಂಡಿಲ್ಲ. ಪ್ರತಿ ಮನುಷ್ಯನನ್ನು ಎಬ್ಬಿಸಿ ವಿಚಾರಿಸುತ್ತಾನೆ ಎಂದಾಗ ಹೇಗೆ ಎಬ್ಬಿಸುತ್ತಾನೋ, ಹೇಗೆ ವಿಚಾರಿಸುತ್ತಾನೋ ಯಾರೂ ಅರ್ಥ

ಮಾಡಿಕೊಂಡಿಲ್ಲ. ಸ್ವರ್ಗ ನರಕಗಳಿಗೆ, ಕಳುಹಿಸುತ್ತಾನೆಂದಾಗ ಎಲ್ಲಿಗೆ ಕಳುಹಿಸುತ್ತಾನೋ ಸ್ವರ್ಗ ನರಕಗಳು ಎಷ್ಟು ದೂರ ಇವೆಯೋ ಯಾರಿಗೂ ಅರ್ಥವಾಗಲಿಲ್ಲ. ಶರೀರದ ಮೇಲೆ ಒಂದು ತುಂಡುಬಟ್ಟೆಯೂ ಸಹ ಇರುವುದಿಲ್ಲವೆಂದು ಪ್ರವಕ್ತ ಹೇಳಿದಾಗ, ಒಂದು ತುಂಡು ಬಟ್ಟೆಯೂ ಯಾಕೆ ಇರುವುದಿಲ್ಲವೋ ಯಾರೂ ಯೋಚಿಸಲಿಲ್ಲ. ಸಮಾಧಿಯಿಂದ ಎಬ್ಬಿಸಿದಾಗ ಯಾವ ಗುಣಗಳು ಇರುವುದಿಲ್ಲ, ಯಾವ ಯೋಚನೆಗಳು ಇರುವುದಿಲ್ಲ. ಎಂದು ಪ್ರವಕ್ತ ಹೇಳಿದ ಮಾತುಗಳಲ್ಲಿನ ಆಂತರ್ಯವನ್ನು ಯಾರೂ ಗ್ರಹಿಸಲಿಲ್ಲ. ಪ್ರವಕ್ತ ಹೇಳಿರುವುದು ಕಳ್ಳನಾದ ನನಗೆ ಚೆನ್ನಾಗಿ ಅರ್ಥವಾಗಿದೆ. ಪ್ರವಕ್ತ ಹೇಳಿದ ಮಾತುಗಳು ಯಾರು ಖಂಡಿಸಲಾರದವು. ಎಷ್ಟೋ ಸತ್ಯವಾದವು. ಆದರೆ ಅವುಗಳನ್ನು ಬಹಳ ಜನ ಅಪಾರ್ಥ ಮಾಡಿಕೊಂಡಿದ್ದಾರೆ. ಇದನ್ನನುಸರಿಸಿ ನೋಡಿದರೆ ಪ್ರವಕ್ತ ಹೇಳಿದ ದೊಡ್ಡ ರಹಸ್ಯವನ್ನು ಪ್ರಜೆಗಳು ತಿಳಿದುಕೊಳ್ಳಲಾರದೆ ಹೋಗಿದ್ದಾರೆಂದು ತಿಳಿಯುತ್ತಿದೆ.

**ಮುಸ್ಲಿಮ್ :–** ಪ್ರವಕ್ತ ಹೇಳಿರುವುದು ನಮಗೆ ಅರ್ಥವಾಗದಿರುವುದು ನಿನಗೆ ಅರ್ಥವಾಗಿದೆಯಾ? ಪ್ರವಕ್ತ ಹೇಳಿರುವುದು ನಮಗೆ ಏನು ಅರ್ಥವಾಗಲಿಲ್ಲವೋ ಒಂದನ್ನು ಹೇಳು.

**ಕಳ್ಳ :–** ಹಾಗೆ ಕೇಳಿದರೇ ಫರವಾಗಿಲ್ಲ. ಪ್ರಶ್ನಿಸಿದಾಗಲೇ ಯಾವುದಾದರೂ ಅರ್ಥವಾಗುವುದು. ಸರಿ ನಾನು ಒಂದು ಮಾತನ್ನು ಕೇಳುತ್ತಿದ್ದೇನೆ. ನನ್ನ ಮಾತಿಗೆ ಸಮಾಧಾನ ಸರಿಯಾಗಿ ಹೇಳಿದರೇ, ಪ್ರವಕ್ತನ ಮಾತು ನಿನಗೆ ಅರ್ಥವಾದಂತೆ, ಇಲ್ಲದೆ ಹೋದರೇ ಅರ್ಥವಾಗದಂತೆ.

**ಮುಸ್ಲಿಮ್ :–** ಸರಿ ಕೇಳಿರಿ, ನನ್ನ ಹೆಸರೇ ವಹೀದ್, ನಾನು ಏಕೆ ಹೇಳಲಾರೆನು?

**ಕಳ್ಳ :–** ವಹೀದ್ ಎನ್ನುವುದು ನಿನ್ನ ಶರೀರದ ಹೆಸರೆಂದು ಜ್ಞಾಪಕದಲ್ಲಿಟ್ಟುಕೋ. ಪ್ರಳಯದಲ್ಲಿ ದೇವರು ಮನುಷ್ಯನನನ್ನು ಪುನಃ ಎಬ್ಬಿಸುತ್ತಾನೆಂದಿದ್ದೀರಲ್ಲವೆ! ಪ್ರಳಯವೆಂದರೆ ಯಾವುದು?

**ವಹೀದ್ :–** ಪ್ರಪಂಚವೆಲ್ಲಾ ನಾಶವಾಗಿ ಹೋಗುವುದೇ ಪ್ರಳಯ.

**ಕಳ್ಳ :–** **'ಪ್ರ'** ಎಂದರೆ ಹುಟ್ಟಿರುವುದು **'ಪಂಚ'** ಎಂದರೆ ಐದು ಎಂದು ಅರ್ಥ. ಪ್ರಪಂಚವೆಂದರೆ ಹುಟ್ಟಿರುವ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎಂದು ಅರ್ಥ. ಪ್ರಳಯವೆಂದರೆ ಹುಟ್ಟಿರುವವು ಲಯವಾಗಿ ಹೋಗುವವು. ಅಥವಾ ನಾಶವಾಗಿ ಹೋಗುವುದೆಂದು ಅರ್ಥ. ಹೊರಗೆ ಕಾಣಿಸುವ ಪ್ರಪಂಚವೊಂದರ ಆಯಸ್ಸು 108 ಕೋಟಿ ವರ್ಷಗಳು. ಕಾಣಿಸುವ ಪ್ರಪಂಚ 108 ಕೋಟಿ ವರ್ಷಗಳಿಗೆ ಪ್ರಳಯ ಹೊಂದುವುದು ನಿಜವೇ. ಆದರೆ ಪ್ರಳಯ ಎನ್ನುವುದು ಮತ್ತೊಂದು ಸಹ ಇದೆ. ಪಂಚ ಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿಯಿಂದ ಏರ್ಪಟ್ಟ ನಿನ್ನ ಶರೀರವೂ ಸಹ ಒಂದು ಪ್ರಪಂಚವೇ. ನಿನ್ನ ಶರೀರ ಐದು ಭೂತಗಳಿಂದಲೇ ಹುಟ್ಟಿದೆ. ನಿನ್ನ ಶರೀರ ಯಾವಾಗ ಮರಣಿಸುತ್ತದೋ ಆ ದಿನವೂ ಸಹ ಪ್ರಳಯವೇ ಎನ್ನಬಹುದು. ಪಂಚ ಭೂತಗಳಿಂದ ಹುಟ್ಟಿದ ಪ್ರಪಂಚಗಳು **ಚರ, ಅಚರ** ಎನ್ನುವ ಎರಡು ಇವೆಯೆಂದು, ಹಾಗೆಯೇ ಪ್ರಳಯಗಳು ಸಹ **ಚರ ಪ್ರಳಯ, ಅಚರ ಪ್ರಳಯ** ಎರಡು ಇವೆಯೆಂದು ಇದರಿಂದ ತಿಳಿಯುತ್ತಿದೆ. ಎರಡು ಪ್ರಳಯಗಳನ್ನು ದೇವರೇ ಸೃಷ್ಟಿಸಿದ್ದಾನೆ. ಪ್ರವಕ್ತ ಹೇಳಿರುವುದು ಚಲಿಸುವ ಚರ ಪ್ರಪಂಚವಾದ ಮನುಷ್ಯನಿಗೇ ಹೊರತು, ಅಚರ ಪ್ರಕೃತಿಯಾದ ಹೊರಗಿನ ಪ್ರಪಂಚಕ್ಕಲ್ಲ. ಪ್ರವಕ್ತ ಮನುಷ್ಯನಿಗೆ ಸಂಬಂಧಿಸಿದ ವಿಷಯಗಳನ್ನು ಹೇಳಿದಾಗ, ಹೇಳಿದ ವಿಷಯವನ್ನು ತನಗೆ ವರ್ತಿಸುವಂತೆ ಮಾಡಿಕೊಂಡು ನೋಡದಂತೆ, ಸಂಬಂಧವಿಲ್ಲದ ಹೊರಗಿನ ಪ್ರಪಂಚಕ್ಕೆ ವರ್ತಿಸುವಂತೆ ಮಾಡುವುದನ್ನನುಸರಿಸಿ ಪ್ರವಕ್ತ ಮಾತನ್ನು ಮನುಷ್ಯ ಅರ್ಥಮಾಡಿಕೊಂಡಿಲ್ಲವೆಂದು ತಿಳಿಯುತ್ತಿದೆ. ಪ್ರವಕ್ತ ಹೇಳಿರುವವೆಲ್ಲಾ ಮನುಷ್ಯನಿಗೆ ಹತ್ತಿರವಾಗಿರುವ ಸೂತ್ರಗಳನ್ನೇ ಹೇಳಿದಾಗ, ಮನುಷ್ಯ ಆ ಮಹಾವ್ಯಕ್ತಿ ಹೇಳಿದ ಅಮೂಲ್ಯವಾದ ಮಾತುಗಳನ್ನು ಅರ್ಥ ಮಾಡಿಕೊಳ್ಳದೇ ತಪ್ಪಾಗಿ ಅರ್ಥ ಮಾಡಿಕೊಂಡು ತಪ್ಪಾಗಿ ನಡೆಯುತ್ತಿದ್ದಾನೆ. ಆತನು ಬೋಧಿಸಿದ ಬೋಧನೆಯಲ್ಲಿ ಒಂದು ಪ್ರಳಯ ಎನ್ನುವ ಮಾತು ಅರ್ಥವಾಗದಿರುವುದರಿಂದ, ಆತನ ಭಾವನೆಗೆ ಎಷ್ಟೋ ದೂರವಾಗಿ ಮನುಷ್ಯ ಹೋಗಿದ್ದಾನೆ. ನಿನ್ನ ಭಾವನೆ ತಪ್ಪು ಎಂದು

ಈಗ ಅರ್ಥವಾಗಿದೆಯಾ ವಹೀದ್, ದೇವರು ಎರಡು ಪ್ರಳಯಗಳಲ್ಲಿ ಪ್ರವಕ್ತರವರು ಹೇಳಿದ ಪ್ರಳಯ ಯಾವುದೋ ತಿಳಿಯದವರು ಉಳಿದ ಆತನ ಮಾತುಗಳನ್ನು ಅರ್ಥಮಾಡಿಕೊಂಡಿದ್ದಾರೆಂದು ನಂಬಿಕೆ ಏನು?

ದೇವರು ಸಮಾಧಿಯಿಂದ ಎಬ್ಬಿಸುತ್ತಾನೆಂದು ಹೇಳಿದ ಪ್ರವಕ್ತ ಮಾತು ನೂರಕ್ಕೆ ನೂರು ಪಾಲು ನಿಜವೇ. ಆದರೇ ಸಮಾಧಿಯೆಂದರೆ ಮನುಷ್ಯನ ಶರೀರ ಕಾಣಿಸದಂತೆ ಹೊದ್ದಿರುವುದೆಂದು ಅರ್ಥ. ಶರೀರ ಕಾಣಿಸದಂತೆ ಹೊದ್ದಿರುವುದು ಭೂಮಿಯಲ್ಲಿ ತೆಗೆಯಲ್ಪಟ್ಟಿರುವ ಕುಣಿ ಎಂದುಕೊಳ್ಳುವುದು ಸರಿಯಾದುದೋ ಅಲ್ಲವೋ ಯೋಚಿಸಿರಿ. ಹೀಗೆ ಎಷ್ಟೋ ವಿಷಯಗಳನ್ನು ನಾವು ಅರ್ಥಮಾಡಿಕೊಳ್ಳದೆ ಹೋಗಿದ್ದೇವೆ. ದೇವರು ಮರಣಿಸಿದ ಸರ್ವ ಮಾನವರಿಗೂ ಸಮಾಧಿಯನ್ನು ಸಮಾನವಾಗಿ ಇಟ್ಟಿದ್ದಾನೆ. ಆ ಸಮಾಧಿಯನ್ನು ಪ್ರವಕ್ತರವರು ಹೇಳಿದರೂ ನಾವು ಅರ್ಥಮಾಡಿಕೊಳ್ಳದೆ ಹೋಗಿದ್ದೇವೆ. ನೀವು ಅಂದುಕೊಂಡಂತೆ ಭೂಮಿಯಲ್ಲಿ ಹೂತಿಟ್ಟಿರುವವನಿಗೆ ಸಮಾಧಿ ಇರುತ್ತದೆ. ಆದರೆ ಅಗ್ನಿಯಲ್ಲಿ ಸುಟ್ಟುಹೋಗಿರುವವರಿಗಾಗಲೀ, ನೀರಿನಲ್ಲಿ ಮುಳುಗಿ ಹೋಗಿರುವವರಿಗಾಗಲೀ ಸಮಾಧಿ ಇರುವುದಿಲ್ಲ ಅಲ್ಲವೆ! ಖುರಾನ್‌ನಲ್ಲಿನ ದೇವರ ವಾಕ್ಯ ಹುಸಿಯಾಗದು. ಅದರ ಪ್ರಕಾರ ಅಗ್ನಿಯಲ್ಲಿ ಸುಟ್ಟುಹೋಗಿರುವವ ನನ್ನಾಗಲಿ, ನೀರಿನಲ್ಲಿ ಮುಳುಗಿಕೊಳೆತು ಹೋಗಿರುವವ ನನ್ನಾಗಲಿ ಕೊನೆಯಲ್ಲಿ ದೇವರು ಸಮಾಧಿಯಿಂದಲೇ ಎಬ್ಬಿಸುತ್ತಾನೆ. ಇದನ್ನನುಸರಿಸಿ ದೇವರ ವಾಕ್ಯ ನೂರಕ್ಕೆ ನೂರು ಪಾಲು ಸತ್ಯ.

ಮುಸ್ಲಿಮ್‌ರು ಪ್ರವಕ್ತ ಹೇಳಿದ ಮಾತುಗಳನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದ ಹಾಗೆ, ಕ್ರೈಸ್ತರು ಕೂಡಾ ಪ್ರಭು ಹೇಳಿದ ವಾಕ್ಯಗಳನ್ನು ಅಪಾರ್ಥ ಮಾಡಿಕೊಂಡಿದ್ದಾರೆ. ಹಾಗೆಯೇ ಹಿಂದೂಗಳು ಕೃಷ್ಣನು ಹೇಳಿದ ಭಗವದ್ಗೀತೆ ಯನ್ನು ಎಷ್ಟೋ ತಪ್ಪಾಗಿ ಅರ್ಥ ಮಾಡಿಕೊಂಡಿದ್ದಾರೆ. ಆದ್ದರಿಂದ ನಿಮ್ಮ ಮೂರು ಮತದವರಿಗೂ ದೇವರು ಸ್ವಲ್ಪವಾದರೂ ಅರ್ಥವಾಗಲಿಲ್ಲ. ಆದರೆ ದೇವರು ನಿಮ್ಮೆಲ್ಲರಿಗೂ ಒಂದು ಅವಕಾಶ ಕೊಟ್ಟಿದ್ದಾನೆ. ಎಲ್ಲ ಮತಗಳಿಗು

ಅತೀತವಾಗಿ, ಮೂವರು ಪ್ರವಕ್ತರು ಹೇಳಿದ ವಾಕ್ಯಗಳಿಗು ಸರಿಯಾದ ಅರ್ಥ ತಿಳಿಸುವ ವ್ಯಕ್ತಿ ಪ್ರಸ್ತುತ ಭೂಮಿಮೇಲೆ ಒಬ್ಬನೇ ಒಬ್ಬನು ಇದ್ದಾನೆ. ಆತನನ್ನು ಆಶ್ರಯಿಸಿದರೂ, ಆತನ ಬೋಧನೆಗಳನ್ನು ಆಶ್ರಯಿಸಿದರೂ, ನಿಮ್ಮ ಪ್ರವಕ್ತರು ಹೇಳಿದ ರಹಸ್ಯಗಳು ನಿಮಗೆ ವಿವರವಾಗಿ ಅರ್ಥವಾಗುತ್ತವೆ. ಆತನು ಯಾರೋ ನನಗೆ ತಿಳಿದರೂ ನಾನು ಕಳ್ಳ ಅಲ್ಲವೆ! ಆದ್ದರಿಂದ ನಾನು ಹೇಳುವುದಿಲ್ಲ. ನೀವೇ ಹುಡುಕಿಕೊಂಡು ಸತ್ಯ ತಿಳಿದುಕೊಂಡು ಸರಿಯಾದ ದೈವಮಾರ್ಗದಲ್ಲಿ ನಡೆಯಿರಿ.

## ಮುಕ್ತಾಯ

(ಈ ನಾಟಕದಲ್ಲಿ ಯಾವ ಮತಸ್ಥನಿಗಾದರೂ ಅರ್ಥವಾಗದ ವಿಷಯವಿದ್ದರೆ ಸಾಮರಸ್ಯವಾಗಿ ಕೇಳಿ ತಿಳಿದುಕೊಳ್ಳಬಹುದು)

**ಅಸತ್ಯವನ್ನು ಸಾವಿರ ಮಂದಿ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಮಂದಿ ಅಲ್ಲಗಳೆದರೂ ಅದು ಅಸತ್ಯವಲ್ಲ.**



**1.** **ತಿಳಿಯದ ಆಕಾಶ ಒಂದಾಗಿದ್ದು**
**ತಿಳಿಯುವ ಸೂರ್ಯ, ಚಂದ್ರ,**
**ನಕ್ಷತ್ರಗಳು ಮೂರು (ತ್ರೈತ) ಇವೆ.**

**2.** **ತಿಳಿಯದ ಕಾಲ ಒಂದಾಗಿದ್ದು**
**ತಿಳಿಯುವ ದಿನ, ಮಾಸ, ಸಂವತ್ಸರ**
**ಮೂರು (ತ್ರೈತ) ಇವೆ.**

**3.** **ತಿಳಿಯದ ಪರಮಾತ್ಮ ಒಂದಾಗಿದ್ದು**
**ತಿಳಿಯುವ ಅಂಡಜ, ಪಿಂಡಜ,**
**ಉದ್ಭಿಜ ಮೂರು (ತ್ರೈತ) ಇವೆ.**

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ**
} ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ = ಬೇವಕೂಫ್ = ನೃಸಿಂಹ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು "ಇಂದೂ ಸರೋವರವೆಂದು" ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ 'ಜ್ಞಾನಿ' ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು 'ಇಂದೂ' ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ 'ಇಂದೂ ಮಹಾ ಸಮುದ್ರ'ವಾಗಿ ಕರೆಯುತ್ತಿದ್ದರು. ("ತ್ರೈತಾಕಾರ ರಹಸ್ಯ" ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

**visit website : www.thraithashakam.org**

ಪ್ರಮುಖರ ಲೇಖೆ

Sakshi News pepar, 21-01-2014



# ಇಂದೂ ದೇಶವೇ ಇಂಡಿಯಾ!

ಹಿಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೆ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತ ಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

Sakshi News pepar, 12-10-2015

## 'ಹಿಂದೂ ಪದಕ್ಕೆ ನಿರ್ವಚನ ತಿಳಿದಿಲ್ಲ'

ಇಂಡೋರ್ : ರಾಜ್ಯಾಂಗ, ನ್ಯಾಯಪರವಾಗಿ ಹಿಂದೂ ಪದಕ್ಕೆ ನಿರ್ವಚನ ತಿಳಿಯದೆಂದು ಕೇಂದ್ರ ಹೋಂಶಾಖ ತಿಳಿಸಿದೆ. ಹಿಂದೂ ಪದದ ನಿರ್ವಚನ ಹೇಳಬೇಕೆಂದು ಮಧ್ಯಪ್ರದೇಶ್‌ಗೆ ಸೇರಿದ ಚಂದ್ರಶೇಖರ್ ಗೌರ್ ಎಂಬ ವ್ಯಕ್ತಿ ಸಮಾಚಾರ ಹಕ್ಕಿನ ಕಾನೂನಿಗೆ ಮಾಡಿಕೊಂಡ ಪಿಟೀಷನ್‌ಗೆ ಉತ್ತರಕೊಡುತ್ತಾ ಹೋಂಶಾಖೆ ಮೇಲಿನ ರೀತಿಯಲ್ಲಿ ಸ್ಪಂದಿಸಿತು. ಆ ಪದಕ್ಕೆ ಸಂಬಂಧಿಸಿದ ಎಂತಹ ಸಮಾಚಾರ ಇಲ್ಲವೆಂದು ಕೇಂದ್ರ ಪೌರ ಸಂಬಂಧಗಳ ಶಾಖಾಧಿಕಾರಿ ಗುರತಿಸಿದಂತೆ ಕೇಂದ್ರ ತಿಳಿಸಿದೆ. ಎಂತಹ ನಿರ್ವಚನ ಇಲ್ಲದಿರುವಾಗ ಇಂತಹ ವರ್ಗದವರು ಹಿಂದೂಗಳೆಂದು ಹೇಗೆ ನಿರ್ಧಾರಿಸುತ್ತಿದ್ದೀರೆಂದು, ದೇಶದಲ್ಲಿ ಹಿಂದೂಗಳು ಮೆಜಾರಿಟೀಯಾಗಿ ಇದ್ದಾರೆಂದು ಹೇಗೆ ಹೇಳುತ್ತಿದ್ದೀರೆಂದು ಗೌರ್ ಪ್ರಶ್ನಿಸಿದ್ದಾರೆ.

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
   ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.
2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.
3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.
4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.
5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.
6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

# ಪ್ರಬೋಧಾನಂದಂ ನಾಟಕಗಳು

## ಇಂದೂ (ಹಿಂದೂ)
## ಮತದಲ್ಲಿ ಸಿದ್ಧಾಂತಕರ್ತರು



ಅದ್ವೈತ ಸಿದ್ಧಾಂತಕರ್ತ ಆದಿ ಶಂಕರಾಚಾರ್ಯರು
Birth:509 BC - Death:477 BC (32 Years) ಕೇರಳ



ವಿಶಿಷ್ಟಾದ್ವೈತ ಸಿದ್ಧಾಂತಕರ್ತ ರಾಮಾನುಜಾಚಾರ್ಯರು
Birth : 1017 – Death : 1137 (120 years) ತಮಿಳನಾಡು



ದ್ವೈತ ಸಿದ್ಧಾಂತಕರ್ತ ಮಧ್ವಾಚಾರ್ಯರು
Birth : 1238 – Death : 1317 (79 years) ಕರ್ನಾಟಕ



ತ್ರೈತ ಸಿದ್ಧಾಂತ ಆದಿಕರ್ತ ಪ್ರಬೋಧಾನಂದ ಯೋಗೀಶ್ವರರು
Birth : 1950 ಆಂಧ್ರಪ್ರದೇಶ್ (ರಾಯಲಸೀಮ)


Author :

The Only Guru of Three Religions The Spiritual Emperor, Thraitha Theorem Originator

**Sri Acharya Prabodhananda Yogeeshwarulu**